# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ನಮ್ಮ ವರ್ಣಮಯ ಧಾರಾವಾಹಿ "ವೀರಹನುಮಾನ್" ಈ ಸಂಚಿಕೆಯಲ್ಲಿ ಮುಗಿಯುತ್ತದೆ. ಮುಂದಿನ ಸಂಚಿಕೆಯಿಂದ ಹೀಗೆಯೇ ವರ್ಣಮಯ ಧಾರಾವಾಹಿಯಾಗಿ "ದೇವೀ ಭಾಗವತ" ಪ್ರಾರಂಭವಾಗಲಿದೆ. ಅದು ಕೂಡಾ ಮಹತ್ವವಾದ ಎಷ್ಟೋ ಅಂಶಗಳಿಂದ ಕೂಡಿದ ಆಕರ್ಷಕವಾದ ಕಥೆಗಳಿಂದ ಎಲ್ಲರನ್ನೂ ಸಂತೃಪ್ತಿಗೊಳಿಸಬಲ್ಲುದೆಂದು ನಂಬುತ್ತೇವೆ. "ಪ್ರಶ್ನೋತ್ತರಗಳು" ಈ ಸಂಚಿಕೆಯಲ್ಲಿಯೇ ಪ್ರಾರಂಭಿಸಿದ್ದೇವೆ.

## ಅಮರವಾಣಿ

ನಾತಂತ್ರೀ ವಾದ್ಯತೇ ವೀಣಾ
ನಾ ಚಕ್ರೋ ವರ್ತತೇ ರಥಃ
ನಾ ಪತಿಸ್ಸುಖ ಮೇದೇವ
ಯಾಸ್ಯಾದಪಿ ಶತಾತ್ಮಜಾ ೧.

[ತಂತಿಯಿಲ್ಲದೆ ವೀಣೆ ಧ್ವನಿಸದು. ಚಕ್ರಗಳಿಲ್ಲದೆ ರಥ ನಡೆಯದು. ನೂರು ಮಂದಿ ಕುಮಾರರಿದ್ದರೂ ಗಂಡನಿಲ್ಲದ ಸ್ತ್ರೀ ಸುಖಪಡಲಾರಳು.]

ಸಂಪುಟ: ೬೧ ಅಕ್ಟೋಬರ್ '೭೮ ಸಂಚಿಕೆ: ೪

ಬಿಡಿ ಪ್ರತಿ ರೂ. ೧–೨೫ :: ವಾರ್ಷಿಕ ಚಂದಾ ರೂ, ೧೫–೦೦






**ಗಂಗಾಧರ್ ಜೇನಾ, ಪಿಚುಕುಲಿ (ಒರಿಸ್ಸಾ)**

ಪ್ರ: ಚಂದಮಾಮ ಎಂಬ ಹೆಸರು ಚಂದ್ರನಿಗೆ ಹೇಗೆ ಬಂತು?

ಉ: ದೇವದಾನವರು ಮಂದರ ಪರ್ವತವನ್ನು ಕಡಗೋಲಾಗಿ ಮಾಡಿ ಅಮೃತಕ್ಕಾಗಿ ಹಾಲಿನ ಸಮುದ್ರವನು ಕಡೆಯುವಾಗ, ಆ ಸಮುದ್ರದಿಂದ ಹಾಲಹಲ ವಿಷವೇ ಮೊದಲಾದುವು ಎಷ್ಟೋ ಹುಟ್ಟಿದುವು. ಹಾಗೆ ಹುಟ್ಟಿದವುಗಳಲ್ಲಿ ಲಕ್ಷ್ಮಿಯೊಬ್ಬಳು, ಚಂದ್ರನೊಬ್ಬ. ಹಾಗೆ ಚಂದ್ರನು ಲಕ್ಷ್ಮಿಗೆ ತಮ್ಮನಾಗುವನು. ಮಾನವರೆಲ್ಲಾ ಲಕ್ಷ್ಮಿಯನ್ನು ತಾಯಿಯಂತೆ ಭಾವಿಸುವುದರಿಂದ, ತಾಯಿಯ ತಮ್ಮ ಚಂದ್ರನು ನಮಗೆಲ್ಲಾ ಸೋದರಮಾವನಾದನು.

**ಹೆಚ್. ಷಾ, ಠಾಣಾ (ಮಹಾರಾಷ್ಟ್ರ)**

ಪ್ರ: ಮಳೆಬಿಲ್ಲು ಅಂದರೇನು?

ಉ: ಕಾಮನಬಿಲ್ಲು ಎಂತಲೂ ಹೇಳುವರು. ಸೂರ್ಯಕಾಂತಿಯಲ್ಲಿ ಏಳು ಬಣ್ಣಗಳು ಮಿಳಿತವಾಗಿವೆ. ಆದುದರಿಂದಲೇ ಸೂರ್ಯನ ರಥಕ್ಕೆ ಏಳು ಕುದುರೆಗಳೆಂದು ಹೇಳುವುದಾಗಿರಬಹುದು. ಚಿತ್ರಕಾರರು ಆ ಕುದುರೆಗಳನ್ನು ಏಳು ಬಣ್ಣಗಳಲ್ಲಿ ಚಿತ್ರಿಸುವುದನ್ನು ನೋಡುತ್ತೇವೆ.

ಆಕಾಶದಲ್ಲಿ ಮಳೆ ಸುರಿಸುವ ಮೋಡಗಳಿರುವಾಗ, ಸೂರ್ಯ ಕಿರಣಗಳು ಆ ಮೋಡಗಳಲ್ಲಿರುವ ಜಲತುಂತುರುಗಳ ಮೂಲಕ ಪಸರಿಸುವಾಗ ಬೇರೆ ಬೇರೆ ಬಣ್ಣದ ಕಿರಣಗಳು ಒಂದರಿಂದೊಂದು ಬೇರೆಯಾಗಿ, ಸೂರ್ಯನ ಎದುರು ದಿಕ್ಕಿನಲ್ಲಿರುವ ಮೋಡಗಳ ಮೇಲೆ ಬೀಳುತ್ತವೆ. ಅದೇ ಮಳೆಬಿಲ್ಲು. ಈ ಮಳೆಬಿಲ್ಲು ಯಾವಾಗಲೂ ಸೂರ್ಯನ ಎದುರು ದಿಕ್ಕಿನಲ್ಲೇ ಇರುತ್ತದೆ. ಸೂರ್ಯಕಾಂತಿಯನ್ನು ತ್ರಿಭುಜ, ಚತುರ್ಭುಜಗಳುಳ್ಳ ಗಾಜಿನ ತುಂಡಿನ ಮೂಲಕ ಪ್ರಸರಿಸುವಂತೆ ಮಾಡಿದರೆ ಮಳೆಬಿಲ್ಲಿನ ಬಣ್ಣಗಳು ಇನ್ನೂ ಸ್ಪಷ್ಟವಾಗಿ ಕಾಣುತ್ತವೆ.

**ಅಪ್ಪಲಯಭಟ್ಲ ನಾಗರಾಜಶರ್ಮ, ಪೀಲೇರು (ಆಂಧ್ರ)**

ಪ್ರ: ಪ್ರಶ್ನೋತ್ತರ ಶೀರ್ಷಿಕೆಯನ್ನು ಕನ್ನಡದಲ್ಲಿ ಮಾತ್ರವೇ ನಿರ್ವಹಿಸುವಿರಾ? ಅಥವಾ ಇಂಗ್ಲೀಷ್ ಮೊದಲಾದ ಇತರ ಭಾಷೆಗಳಲ್ಲಿಯೂ ನಿರ್ವಹಿಸುವಿರಾ?

ಉ: ಇಂಗ್ಲೀಷು ಚಂದಮಾಮದಲ್ಲಿ ಈ ಮೊದಲೇ ಪ್ರಶ್ನೋತ್ತರಗಳಿವೆ. ಈಗ ಎಲ್ಲಾ ಭಾಷೆಗಳಲ್ಲಿಯೂ ನಿರ್ವಹಿಸುತ್ತೇವೆ. ಎಲ್ಲಾ ಭಾಷೆಗಳವರ ಪ್ರಶ್ನೆಗಳಿಗೂ ಪ್ರತ್ಯುತ್ತರ ನೀಡುತ್ತೇವೆ.



# ಲಬ್ಧಪ್ರಣಾಶ

೬೩

**ಕೋ**ತಿ ಹೇಳಿದ ಮಾತನ್ನು ಕೇಳಿ ಮೊಸಳೆಗೆ ನಿರಾಶೆಯೂ ಅವಮಾನವೂ ಉಂಟಾಗಿ ಏನೂ ತೋರದೆ ಹೋಯಿತು. ಮನೆಗೆ ಹೋದರೆ ಹೆಂಡತಿಯ ಬಾಯಿಗೆ ಬೇರೆ ಬೀಳಬೇಕಲ್ಲ? ಅದು ತನ್ನೊಳಗೆ "ನನ್ನದೆಂತಹ ಮಂಕುಬುದ್ಧಿಯೋ? ಅದರ ಹತ್ತಿರ ಏಕೆ ಕರೆದೊಯ್ಯುವೆನೆಂಬ ನಿಜವನ್ನು ಹೇಳಿದ್ದೇ ಮೋಸವಾಯಿತು. ಹೇಗಾದರೂ ಮಾಡಿ ಅದರ ವಿಶ್ವಾಸ ಮತ್ತೆ ಸಂಪಾದಿಸಬೇಕು" ಎಂದುಕೊಂಡು ಕೋತಿಯನ್ನು ನೋಡಿ, "ಕೋಪಿಸಬೇಡ ಮಿತ್ರಾ, ನಿನ್ನನ್ನು ಪರೀಕ್ಷಿಸಲಿಕ್ಕಾಗಿ ಹಾಸ್ಯ ಮಾಡಿದೆನಪ್ಪಾ. ಇಲ್ಲದಿದ್ದರೆ ಪ್ರಾಣಿಗಳ ಶರೀರದಿಂದ ಗುಂಡಿಗೆ ಬೇರೆಯಾಗಿರುವುದೆಂದು ತಿಳಿಯಲು ನಾನೇನು ಹುಚ್ಚನೇ? ನಿನ್ನ ಗುಂಡಿಗೆಯಿಂದ ನನ್ನ ಹೆಂಡತಿಗೆ ಏನಾಗಬೇಕಾಗಿದೆ? ತನ್ನ ಗಂಡನ ಪ್ರಾಣಸ್ನೇಹಿತನನ್ನು ಕೊಲ್ಲಬೇಕೆಂದು ಹೆಂಡತಿಯಾದವಳು ಅಂದುಕೊಳ್ಳುವಳೇ? ಸಂದೇಹಬಿಟ್ಟು ಬಂದು ಬಿಡು. ಅವಳು ಮನೆಬಾಗಿಲಲ್ಲಿ ನಿನ್ನನ್ನು ಇದಿರುನೋಡಿ ಕೊಂಡಿದ್ದಾಳೆ" ಎಂದಿತು.

"ಹೋಗೋ ತುಚ್ಛಾ! ನಾನು ನಿನ್ನ ಜತೆಯಲ್ಲಿ ಇನ್ನು ಮೇಲೆಯೂ ಬರಬೇಕೆ? ಬರುತ್ತೇನೆ! ಬರುತ್ತೇನೆ! ನೀನು ಹೋಗಿ ಕಾದಿರು ಬಾಯಿಯಲ್ಲಿ ನೀರಿಳಿಸಿಕೊಂಡು! ಹಿಂದೆ ಗಂಗಾದತ್ತನು ಹೇಳಿದ ನಂತೆ, ಹಸಿದವನು ಯಾವ ಪಾಪಕ್ಕೂ ಹಿಂಜರಿಯನು. ಬಲಹೀನನ ಮೇಲೆ ದಯೆಯೇ ಹುಟ್ಟದು. ಗಂಗಾದತ್ತ ಇನ್ನು ಬಾವಿಯ ಬಳಿಗೆ ಬರಲಾರನೆಂದು ಪ್ರಿಯದರ್ಶನನಿಗೆ ಹೇಳು! ಹೋಗು, ಹೋಗು!" ಎಂದಿತು ಕೋತಿ.

"ಅದೇನು ಕಥೆಯಪ್ಪಾ?" ಎಂದು ಮೊಸಳೆ ಕೇಳಿತು. ಕೋತಿ "ಕುರುಡು ಹಗೆ" ಎಂಬ ಕಥೆಯನ್ನು ಹೇಳತೊಡಗಿತು:

ಒಂದಾನೊಂದು ಬಾವಿಯಲ್ಲಿ ಗಂಗಾದತ್ತನೆಂಬ ಒಂದು ಕಪ್ಪೆಗಳ ದೊರೆ ಇದ್ದಿತು. ಅದನ್ನು ಬಂಧುಗಳೆಲ್ಲ ಅವಮಾನಪಡಿಸಿದ ಕಾರಣದಿಂದ, ಅದು ಹಗ್ಗದ ಸಹಾಯದಲ್ಲಿ ಬಾವಿಯೊಳಗಿನಿಂದ ಹೊರಗೆ ಬಂದು, ತನ್ನ ಬಂಧುಗಳ ಮೇಲೆ ಹಗೆ ಸಾಧಿಸುವುದು ಹೇಗೆಂದು ಆಲೋಚಿಸತೊಡಗಿತು.



ಆಗ ಪ್ರಿಯದರ್ಶನವೆಂಬ ಹಾವು ತನ್ನ ಬಿಲದೊಳಗೆ ಹೋಗುವುದನ್ನು ಅದು ನೋಡಿತು. "ಈ ಹಾವನ್ನು ಬಾವಿಯೊಳಗೆ ಕರೆದುಕೊಂಡು ಹೋಗಿ, ನನ್ನ ಬಂಧುಬಳಗದವರನ್ನೆಲ್ಲಾ ಸಾಯಿಸಿಬಿಡುತ್ತೇನೆ. ಶತ್ರುವನ್ನು ಅವನ ಶತ್ರುವಿನ ಸಹಾಯದಿಂದಲೇ ನಾಶಮಾಡಬೇಕು. ಬಲವಂತನ ಮೇಲೆ ಅವನಿಗಿಂತ ಬಲವಂತನನ್ನೇ ಕಳುಹಿಸಬೇಕು. ಮುಳ್ಳಿನಿಂದಲೇ ಮುಳ್ಳನ್ನು ತೆಗೆಯಬೇಕು. ಆದರಿಂದ ನಮಗೆ ಯಾವ ಅಪಾಯವೂ ಬಾರದು" ಎಂದುಕೊಂಡಿತು ಗಂಗಾದತ್ತ ಕಪ್ಪೆ.

ಹೀಗೆಂದುಕೊಂಡು ಅದು ಹಾವಿನ ಬಿಲದ ಬಳಿಗೆ ಹೋಗಿ "ಪ್ರಿಯದರ್ಶನಾ, ಒಂದುಸಾರಿ ಹೊರಗೆ ಬಾರಯ್ಯ" ಎಂದು ಕರೆಯಿತು.

ಆ ಕರೆಯನ್ನು ಕೇಳಿ ಹಾವು, "ಕರೆಯುವ ಸ್ವರವನ್ನು ಕೇಳಿದರೆ ಹಾವಿನ ಜಾತಿಯಂತಿಲ್ಲ. ಹಾವಿನ ಕಂಠಸ್ವರ ಹೀಗಿರುವುದಿಲ್ಲ. ನನ್ನೊಡನೆ ಹಾವುಗಳಲ್ಲದೆ ಇನ್ನಾರೂ ಸ್ನೇಹಮಾಡರು. ಕರೆಯುವವನ ಜಾತಿ, ಗುಣ, ವಾಸಸ್ಥಳ, ಬಲ ಇವನ್ನೆಲ್ಲ ತಿಳಿಯದೆ ಸ್ನೇಹಮಾಡಿ ಬಿಡಬಾರದು. ಕರೆಯುವವನು ಹಾವುಗಳನ್ನು ಹಿಡಿಯುವವನೋ, ವಿಷವೈದ್ಯನೋ ಆಗಿರಬಹುದು. ಯಾರು ಕಂಡರು? ಅಥವಾ ನನ್ನನ್ನು ಕೊಯ್ದು ಅವನ ಶತ್ರುವಿನ ಆಹಾರದಲ್ಲಿ ಬೆರೆಸಿ ಕೊಲ್ಲಬೇಕೆಂದಿರುವವನೂ ಆಗಿರಬಹುದು" ಎಂದು ಅಂದುಕೊಳ್ಳುತ್ತ "ಯಾರದು ಕರೆಯುವುದು?" ಎಂದು ಕೇಳಿತು.

"ನಾನು ಕಪ್ಪೆಗಳ ದೊರೆ. ನನ್ನ ಹೆಸರು ಗಂಗಾದತ್ತ. ನಿನ್ನ ಸ್ನೇಹವನ್ನು ಆಶಿಸಿ ಬಂದಿದ್ದೇನೆ" ಎಂದಿತು ಕಪ್ಪೆ.

"ಇದು ನಂಬುವಂತಹ ಮಾತೇನು? ಒಣ ಹುಲ್ಲಿಗೂ ಬೆಂಕಿಗೂ ಸ್ನೇಹವೆಂಥದು? ತನ್ನನ್ನು ನಿಜಕ್ಕೂ ಕೊಲ್ಲುವವನ ಬಳಿಗೆ ಸ್ವಪ್ನದಲ್ಲಿ ಕೂಡಾ ಯಾರೂ ಹೋಗಲಾರರು. ನಿನ್ನ ವ್ಯರ್ಥಪ್ರಲಾಪಗಳನ್ನು ಸಾಕು ಮಾಡು. ನಾನು ನಂಬಲಾರೆ" ಎಂದಿತು ಹಾವು.

"ನೀನು ಹೇಳುವುದು ನಿಜವೇ. ನಮಗೆ ನೀನು ಸಹಜವೈರಿಯೇ ನಿಜ. ಆದರೆ ನನ್ನ ಶತ್ರುಗಳಿಂದ ಅವಮಾನಿತನಾಗಿ ನಿನ್ನ ಬಳಿಗೆ ಬಂದಿದ್ದೇನೆ. ಪ್ರಾಣಕ್ಕೂ ಧನಕ್ಕೂ ಹಾನಿಯುಂಟಾದಾಗ ಅವೆರಡನ್ನೂ ಕಾಪಾಡಿಕೊಳ್ಳಲಿಕ್ಕಾಗಿ ಶತ್ರುವನ್ನು ಕೂಡಾ ಆಶ್ರಯಿಸಬೇಕೆಂದು ಹಿರಿಯರು ಹೇಳುತ್ತಾರೆ" ಎಂದಿತು ಕಪ್ಪೆ.

"ಯಾರು ನಿನ್ನ ಶತ್ರುಗಳು?" ಎಂದು ಹಾವು ಕಪ್ಪೆಯನ್ನು ಕೇಳಿತು.

"ನನ್ನ ಬಂಧುಗಳೇ" ಎಂದಿತು ಕಪ್ಪೆ.

"ಅವರು ಎಲ್ಲಿದ್ದಾರೆ? ಬಾವಿಯೊಳಗೋ? ಕೆರೆಯಲ್ಲಿಯೋ? ಸರೋವರದಲ್ಲಿಯೋ?" ಎಂದು ಹಾವು ಕೇಳಿತು.

"ಅಲ್ಲಿ ಕಾಣುವ ಇಳಿಬಾವಿಯಲ್ಲಿ ಅವರೆಲ್ಲ ಇದ್ದಾರೆ" ಎಂದಿತು ಕಪ್ಪೆ.

"ನನಗೆ ಕಾಲುಗಳಿಲ್ಲ. ಇಳಿಬಾವಿಯೊಳಗೆ ಹರಿಯುಲಾರೆ. ಒಂದುವೇಳೆ ಇಳಿದೆನಾದರೂ ನಿನ್ನ ಬಂಧುಗಳನ್ನು ಕೊಲ್ಲುವಂಥ ಸೌಕರ್ಯ ಅಲ್ಲಿಲ್ಲ. ಅದು ನನಗೆ ತಕ್ಕ ಸ್ಥಳವೂ ಅಲ್ಲ. ಆದುದರಿಂದ ನೀನು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಹೋಗಿಬಿಡು. ಹಿತವಾದುದನ್ನೇ ತಿನ್ನಬೇಕು. ಜೀರ್ಣವಾಗದಂತಹುದನ್ನು ಕಬಳಿಸಬಾರದು. ಕ್ಷೇಮಕರವಾದುದನ್ನೇ ಹೊಟ್ಟೆಗೆ ಸೇರಿಸಬೇಕೆಂದು ಹಿರಿಯರು ಹೇಳುತ್ತಾರೆ" ಎಂದಿತು ಹಾವು.

"ಅದಕ್ಕೇನೂ ಚಿಂತಿಸಬೇಕಾಗಿಲ್ಲ. ನನ್ನ ಹಿಂದೆಯೇ ಬಾ. ಬಾವಿಯೊಳಗೆ ಸುಲಭದಲ್ಲಿ ಇಳಿಯುವ ದಾರಿ ತೋರಿಸುತ್ತೇನೆ. ಅದರಲ್ಲಿ ಇಳಿದು ಬಂದು ನೀನು ನನ್ನ ಬಂದುಗಳೆಲ್ಲರನ್ನೂ ಕೊಂದುಬಿಡಬಹುದು." ಎಂದಿತು ಕಪ್ಪೆಗಳ ದೊರೆ.

ಈ ಮಾತಿಗೆ ಹಾವು ತನ್ನೊಳಗೆ, "ನನಗೆ ವಯಸ್ಸಾಗಿ ಹೋಯಿತು. ಯಾವಾಗಲಾದರೂ ಒಮ್ಮೆ ಮಾತ್ರ ಒಂದು ಇಲಿಯನ್ನು ಹಿಡಿಯುತ್ತೇನೆ ಅಷ್ಟೇ. ಕುಲದ್ರೋಹಿ ಕಪ್ಪೆ ನನಗೆ ಸುಖವಾಗಿ ದಿನಗಳೆಯುವಂಥ ದಾರಿ ತೋರಿಸುತ್ತಿದೆ. ಇದರ ಹಿಂದೆ ಹೋಗಿ ಕಪ್ಪೆಗಳನ್ನು ತಿಂದುಬಿಡಬಹುದು. ಶಕ್ತಿಯುಡುಗಿ ಅವಸಾನ ದಶೆಗೆ ಮುಟ್ಟಿದವನು, ಸುಖವಾಗಿ ದಿನ ಕಳೆಯುವ ದಾರಿ ತಾನಾಗಿ ಇದಿರು ಬಂದಾಗ ಕುರುಡನಾಗಿರಬಾರದು." ಎಂದುಕೊಂಡು ಕಪ್ಪೆಯೊಂದಿಗೆ, "ಹಾಗಾದರೆ ಸರಿ, ಗಂಗಾದತ್ತಾ, ನೀನು ಮುಂದೆ ಹೋಗು, ನಾನು ನಿನ್ನ ಹಿಂದೆಯೇ ಬರುತ್ತೇನೆ" ಎಂದಿತು.

"ಪ್ರಿಯದರ್ಶನಾ, ಬಾವಿಗಿಳಿಯಲು ಸುಲಭವಾದ ದಾರಿ ಮಾತ್ರವಲ್ಲದೆ, ಅಲ್ಲಿ ನೀನು ನಿಶ್ಚಿಂತೆಯಾಗಿರಲು ತಕ್ಕ ಸ್ಥಳವನ್ನೂ ತೋರಿಸುತ್ತೇನೆ.



ಆದರೆ ನೀನು ನನ್ನ ಕುಟುಂಬದವರ ತಂಟೆಗೂ, ನನ್ನ ಸೇವಕರ ತಂಟೆಗೂ ಹೋಗಕೂಡದು. ನಾನು ತೋರಿಸುವ ಕಪ್ಪೆಗಳನ್ನು ಮಾತ್ರ ತಿನ್ನಬೇಕು" ಎಂದಿತು ಕಪ್ಪೆಗಳ ದೊರೆ.

"ಈಗ ನೀನು ನನ್ನ ಮಿತ್ರನಾದುದರಿಂದ ನಿನ್ನವರನ್ನೆಲ್ಲಾ ನನ್ನವರ ಹಾಗೇ ನೋಡಿಕೊಳ್ಳುತ್ತೇನೆ. ನೀನು ಹೇಳಿದವರನ್ನೇ ತಿನ್ನುತ್ತೇನೆ." ಎಂದು ಹಾವು ತನ್ನ ಬಿಲದಿಂದ ಹೊರಗೆ ಬಂದು, ಕಪ್ಪೆಯನ್ನು ಆಲಿಂಗಿಸಿ, ಅದರ ಹಿಂದೆ ಹೊರಟಿತು.

ಕಪ್ಪೆ ಹಗ್ಗದ ಮೂಲಕವಾಗಿ ಹಾವನ್ನು ಬಾವಿಯೊಳಗೆ ಇಳಿಸಿ, ಅದು ಸುರುಟಿಕೊಂಡಿರಲು ತಕ್ಕುದಾದ, ನೀರಿನ ಮಟ್ಟದಲ್ಲಿರುವ ಒಂದು ಪೊಟರೆಯನ್ನು ತೋರಿಸಿತು.

ಆ ಮೇಲೆ ಆ ಕಪ್ಪೆ ತನ್ನ ಬಂಧುಗಳು ಯಾರೆಂದು ಹಾವಿಗೆ ತೋರಿಸುತ್ತಿರಲು, ಹಾವು ಅವುಗಳನ್ನು ಹಿಡಿಹಿಡಿದು ಕಬಳಿಸಲೂ ತೊಡಗಿತು. ಹಾವಿಗೆ ಇದ್ದಲ್ಲೇ

ಹೊಟ್ಟೆ ತುಂಬುತ್ತ ಬಹಳ ಸಂತೋಷವೂ ಆಯಿತು. ಹೀಗೆ ದಿನಾ ನಡೆಯುತ್ತಿದ್ದರೆ ಎಷ್ಟು ದಿನ ನಡೆದೀತು? ಬೇಗದಲ್ಲೇ ಆ ಕಪ್ಪೆರಾಜನ ಬಂಧುಗಳೆಲ್ಲಾ ಮುಗಿದುಹೋದರು. ಆಗ ಆ ಹಾವು, ಕಪ್ಪೆಗಳ ದೊರೆಯನ್ನು ನೋಡಿ, "ಗಂಗಾದತ್ತಾ, ನಿನ್ನ ಬಂಧುಗಳನ್ನೆಲ್ಲಾ ಕೊಂದು ತಿಂದು ತೀರಿಸಿಯಾಯಿತು. ಇನ್ನು ನನಗೆ ಬೇರೆ ಆಹಾರ ಕೂಡಾ ನೀನೇ ತೋರಿಸಬೇಕು" ಎಂದಿತು.

"ಮಿತ್ರನೇ, ನನ್ನ ಶತ್ರುಗಳನ್ನೆಲ್ಲಾ ಕೊಂದು ತೀರಿಸಿಯಾದ ಮೇಲೆ ನಿನ್ನ ಕೆಲಸ ಮುಗಿಯಿತು. ಇನ್ನು ಹಗ್ಗದ ಮೂಲಕ ಮೇಲೇರಿ ಇಲ್ಲಿಂದ ಹೊರಟು ಹೋಗಿಬಿಡು" ಎಂದಿತು ಕಪ್ಪೆ.

"ಗಂಗಾದತ್ತಾ. ನಿನ್ನ ಮಾತು ಸರಿಯಾಗಿಲ್ಲ. ನನ್ನನ್ನು ನನ್ನ ಹಳೆಯ ಮನೆಗೆ ಹೇಗೆ ಹೋಗಲು ಹೇಳುವಿ? ಆ ಮನೆಯಲ್ಲಿ ಇನ್ನೊಂದು ಹಾವು ಆಗಲೇ ಸೇರಿಕೊಂಡಿರಬಹುದು. ಆದುದರಿಂದ ನಾನಿನ್ನು ಇಲ್ಲಿಯೇ ಇರುತ್ತೇನೆ. ನಿನಗೆ ಬೇಕಾದವರಾದರೂ ಸರಿಯೇ, ನನಗೆ ದಿನಾ ಒಂದೊಂದು ಕಪ್ಪೆಯನ್ನು ಕೊಟ್ಟುಬಿಡು. ಇಲ್ಲದಿದ್ದಲ್ಲಿ ಎಲ್ಲರನ್ನೂ ನುಂಗಿ ಬಿಡುತ್ತೇನೆ" ಎಂದಿತು.

ಹಾವಿನ ಮಾತು ಕೇಳಿ ಕಪ್ಪೆ ಚಿಂತೆಯಿಂದ, "ಈ ಹಾವನ್ನು ಇಲ್ಲಿಗೆ ಕರೆ ತಂದುದು ದೊಡ್ಡ ತಪ್ಪಾಯಿತು! ಇದು ಹೇಳಿದ ಹಾಗೆ ಮಾಡದೆ ಹೋದರೆ ನಮ್ಮೆಲ್ಲರನ್ನೂ ನುಂಗಿ ವಂಶವನ್ನೇ ನಾಶ ಮಾಡುತ್ತದೆ. ಪ್ರಬಲ ಶತ್ರುವಿನೊಂದಿಗೆ ಮೈತ್ರಿಯೆಂಬುದು ಪ್ರಾಣ ತೆಗೆಯುವಂಥ ವಿಷವೇ ಸರಿ. ಇದೀಗ ನನ್ನ ಅನುಭವಕ್ಕೆ ಬಂತು. ಉಪಾಯವಿಲ್ಲ. ನನ್ನ ಕಡೆಯವರನ್ನೇ ದಿನಕ್ಕೊಂದರಂತೆ ಕೊಡುವುದೇ ಒಳ್ಳೆಯದು. ಬಲವಂತನಿಗೆ ಒಂದು ಚಿಟಿಕೆಯಷ್ಟಾದರೂ ತಿಂಡಿ ಕೊಡದೆ ಹೋದರೆ ದುರ್ಬಲನಿಗೆ ಇದ್ದುದೆಲ್ಲಾ ಕಳೆದುಕೊಳ್ಳಬೇಕಾಗುತ್ತದೆ. ಮೊತ್ತದ ಮೇಲೆಯೇ ಕುತ್ತು ಬಂದು ಬೀಳುವಾಗ ವಿವೇಕಿಯಾದವನು ಅರ್ಧವನ್ನಾದರೂ ತ್ಯಾಗ ಮಾಡುತ್ತಾನೆ. ಎಲ್ಲಾ ಕಳೆದುಕೊಳ್ಳುವುದಕ್ಕಿಂತ ಅರ್ಧವನ್ನಾದರೂ, ಉಳಿಸಿಕೊಳ್ಳಲು ನೋಡಬೇಕು." ಎಂದು ತನ್ನೊಳಗೇ ಮಥಿಸಿಕೊಂಡು, ತನ್ನ ಕಡೆಯ ಒಂದೊಂದೇ ಕಪ್ಪೆಯನ್ನು ದಿನಕ್ಕೊಂದರಂತೆ ಹಾವಿಗೆ ತಿನ್ನಲು ಕೊಡಲು ಒಪ್ಪಿಕೊಂಡಿತು. ಹಾವು ಗಂಗಾದತ್ತ ಕಪ್ಪೆ ತೋರಿಸಿದ ಕಪ್ಪೆಯನ್ನು ಮಾತ್ರವಲ್ಲದೆ, ಅದಕ್ಕೆ ತಿಳಿಯದಂತೆ ಮತ್ತೂ ಕೆಲವು ಕಪ್ಪೆಗಳನ್ನು ಕೂಡಾ ತಿನ್ನುತ್ತಿತ್ತು. ಕೊಳೆ ಬಟ್ಟೆಯನ್ನು ಕಟ್ಟಿಕೊಂಡವನು ಎಲ್ಲಿಯಾದರೂ ಕುಸಿಕೂಡುವ ಹಾಗೆ ಒಂದುಸಾರಿ ನೀತಿ ತಪ್ಪಿದವನು, ಎಷ್ಟುಸಾರಿ ಬೇಕಾದರೂ ನೀತಿಗೆಟ್ಟು ನಡೆಯುತ್ತಾನೆ.





# ಸಲಹೆ ಸರಿಯಲ್ಲ

ಸಹನೆಯೊಂದಿಗೆ ಕತೆ ಬೇರೆ ಹೇಳುವ ಬೇತಾಳನಿಗಿಂತ ತಾನೇನೂ ಕಡಿಮೆಯವನಲ್ಲವೆಂಬಂತೆ, ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿರುವ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹಾಕಿಕೊಂಡು, ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತನಾಡಲು ತೊಡಗಿ, "ರಾಜನೇ, ನೀನು ಸಮರ್ಥರಾದ ಮಂತ್ರಿಗಳ ಸಲಹೆ ಪಡೆದ ಮೇಲೆಯೇ ಈ ಶ್ರಮಕಾರ್ಯಕ್ಕೆ ತಲೆಕೊಟ್ಟ ಹಾಗೆ ಕಾಣುತ್ತದೆ. ಆದರೆ ಸಲಹೆಗಾರರು ಎಷ್ಟೇ ಸಮರ್ಥರಾದರೂ ಒಂದೊಂದು ಸಾರಿ ತಪ್ಪು ಆಲೋಚನೆ ಹೇಳಲೂ ಬಹುದು. ಆಗ ಅವರ ಆಲೋಚನೆಯಂತೆ ಮಾಡಿದ ಕಾರ್ಯ ನಿರುಪಯೋಗಿಯಾಗುತ್ತದೆ. ಇದಕ್ಕೆ ನಿದರ್ಶನವಾಗಿ ನಿನಗೆ ಮಣಿಕೇತ ಮಹಾರಾಜನ ವೃತ್ತಾಂತ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಿಸಿತು:

ಮಣಿಪುರವನ್ನು ಆಳಿಕೊಂಡಿದ್ದ ಮಹಾರಾಜನಿಗೆ ಬಹಳ ಕಾಲದ ವರೆಗೆ ಮಕ್ಕಳು ಹುಟ್ಟದೆ, ಕಡೆಗೆ

## ಬೇತಾಳಕಥೆಗಳು



ಮಣಿಮಂಜರಿ ಎಂಬ ಮಗಳು ಹುಟ್ಟಿದಳು. ತಂದೆ ತಾಯಿಯರು ತಮ್ಮ ಏಕಮಾತ್ರ ಪುತ್ರಿಯನ್ನು ಮಿತಿಮೀರಿದ ಅಚ್ಚಿಯಿಂದ ಬೆಳೆಸಿದ ಕಾರಣದಿಂದಾಗಿ ಮಣಿಮಂಜರಿ ದಿನೇ ದಿನೇ ಹಟಮಾರಿಯಾಗುತ್ತಾ ಮಹಾ ಹಟಮಾರಿಯಾಗಿ ದೊಡ್ಡವಳಾದ ಮೇಲೆ ಸಮಸ್ಯೆಯಾದಳು.

ಚಿಕ್ಕಂದಿನಿಂದಲೂ ಆತ್ಮನಿಗ್ರಹವೆಂಬುದರ ಗಂಧ ವನ್ನೇ ಅವಳು ಅರಿಯದಾದಳು. ಪ್ರತಿಯೊಂದಕ್ಕೂ ತಾರಕಸ್ಥಾಯಿಯಲ್ಲೇ ರೇಗಾಡುವಳು. ಕೈಗೆ ಏನು ಸಿಕ್ಕಿದರೂ ಅದನ್ನೆತ್ತಿ ಬಿಸುಟು ರಂಪ ಮಾಡುವಳು. ಯಾರ ತರಾತರವನ್ನೂ ನೋಡದೆ ಬಾಯಿಗೆ ಬಂದ ಬೈಗುಳನ್ನು ಹೇಳಿಬಿಡುವಳು. ದಿನ ಬೆಳಗಾದರೆ ಅವ ಳಿಗೆ ಯಾರ ಮೇಲೆ ಯಾವ ಕ್ಷಣದಲ್ಲಿ ಕೋಪ ಬರು ವುದೋ ಎಂದು ರಾಜನೂ ರಾಣಿಯೂ ಭಯ ಪಡುತ್ತ ಪ್ರಾಣವನು ಮುಷ್ಟಿಯಲ್ಲಿಟ್ಟುಕೊಂಡು ಸಂಕಟಪಡುತ್ತಿದ್ದರು.

ಇವಳನ್ನು ಹೇಗೆ ಸರಿ ಮಾಡಬೇಕೆಂದು ಅವರಿಗೆ ಗೊತ್ತಾಗದೆ ಚಿಂತಿಸತೊಡಗಿದರು. ಕ್ರಮೇಣ ಮಣಿಮಂಜರಿಗೆ ಯುಕ್ತವಾದ ವಯಸ್ಸು ಬಂದಾಗ ಅವಳ ವಿವಾಹವು ದೊಡ್ಡದೊಂದು ಉಭಯ ಸಮಸ್ಯೆಯಾಗಿ ಕುಳಿತಿತು. ಅಷ್ಟೊಂದು ಕೋಪಿಷ್ಠಳಾದ ಹುಡುಗಿ, ಎಷ್ಟೇ ಸುಂದರಿಯಾದರೂ ಮದುವೆ ಮಾಡಿಕೊಳ್ಳಲು ಯಾರೂ ಸಾಹಸ ಮಾಡ ಲಾರರೆಂದು ಒಂದು ಸಮಸ್ಯೆ. ತನ್ನ ಅನಂತರ ಅವಳು ರಾಜ್ಯಪಾಲನೆಗೆ ಉಪಯೋಗವಿಲ್ಲದವ ಳೆಂಬುದು ಇನ್ನೊಂದು ಸಮಸ್ಯೆ.

ಈ ಎರಡು ಸಮಸ್ಯೆಗಳೂ ಒಂದೇ ಪೆಟ್ಟಿಗೆ ಪರಿ ಹ್ಯಾರವಾಗಬೇಕಾದರೆ ಒಂದೇ ದಾರಿ. ಮಗಳನ್ನು ಮದುವೆಯಾಗುವವನಿಗೇ ರಾಜ್ಯಾಭಿಷೇಕವನ್ನೂ ಮಾಡಿಬಿಡುವುದು. ಹೀಗೆ ಪ್ರಕಟಿಸಿಬಿಟ್ಟರೆ ಅವಳಿ ಗಾಗಿಯಲ್ಲದಿದ್ದರೂ, ರಾಜ್ಯದ ಆಸೆಯಿಂದಾದರೂ ರಾಜಕುಮಾರ ವರಂದಿರು ಮುಂದೆ ಬರಬಹುದು. ಹಾಗಂದ ಮಾತ್ರಕ್ಕೆ ಯಾವನೋ ಸಿಕ್ಕಿದವನಿಗೆ ತನ ರಾಜ್ಯವನ್ನು ಒಪ್ಪಿಸಲು ರಾಜನಿಗೆ ಇಷ್ಟವಿಲ್ಲ. ವ್ರತ ಕೆಟ್ಟರೂ ಫಲವಾದರೂ ಸಿಗಬೇಕು. ಮಣಿಮಂಜರಿ ಯನ್ನು ವಿವಾಹ ಮಾಡಿಕೊಳ್ಳುವವನು ಅವಳ ಗುಣ ವನ್ನು ಬದಲಾಯಿಸುವವನಾಗಿ, ರಾಜ್ಯಭಾರವನೂ ನಿರ್ವಹಿಸುವವನಾಗಿ ಇರಬೇಕಾದುದು ಅತ್ಯಗತ್ಯ.

ಈ ದೃಷ್ಟಿಯನ್ನಿಟ್ಟುಕೊಂಡು ಮಣಿಕೇತ ರಾಜನು ಎರಡು ದೇಶದ ರಾಜಕುಮಾರರನ್ನು ಆರಿಸಿ ಕೊಂಡನು. ವಿಜಯ ಮತ್ತು ಜಯ ಎಂಬ ಆ ಇಬ್ಬರು ರಾಜಕುಮಾರರನ್ನು ಮಣಿಮಂಜರಿಗಾಗಿ ಆರಿಸಿಕೊಂಡು, ಅವರಿಗೆ ಆಹ್ವಾನ ಕಳುಹಿಸಿ ಕರೆಯಿಸಿ ಕೊಂಡನು.

ಆ ಮೇಲೆ ಮಣಿಕೇತರಾಜನು ವಿಜಯನನ್ನು ಏಕಾಂತಕ್ಕೆ ಕರೆದು, "ನನ್ನ ಕುಮಾರಿಯನ್ನು ಮದುವೆ ಯಾಗುವವನು ನನ್ನ ರಾಜ್ಯಕ್ಕೂ ವಾರಸುದಾರ

ನಾಗುವನೆಂದು ಪ್ರಕಟಿಸಲು ನಿಶ್ಚಯಿಸಿದ್ದೇನೆ. ಆದರೆ ಒಂದು ಮುಖ್ಯ ಸಂಗತಿ ಹೇಳುತ್ತೇನೆ. ನನ್ನ ಕುಮಾರಿಗೆ ವಿಪರೀತ ಕೋಪವಿರುತ್ತದೆ. ಕೋಪ ಬಂದಾಗ ಅವಳು ಏನು ಮಾಡುವಳೆಂಬುದನ್ನು ಹೇಳಲು ಸಾಧ್ಯವಿಲ್ಲ. ಹೆಣ್ಣು ರೂಪದ ದೂರ್ವಾಸಿನಿಯೇ! ಆದುದರಿಂದ ಅವಳನ್ನು ಮದುವೆಯಾಗುವುದರಿಂದ, ಗಯ್ಯಾಳಿ ಹೆಂಡತಿಯೊಂದಿಗೆ ಪೇಚಾಡುವಂಥ ನಷ್ಟವೂ ಇದೆ. ಮುಚ್ಚುಮರೆ ಮಾಡದೆ ಇರುವ ವಿಷಯ ಹೇಳಿದ್ದೇನೆ. ಆಮೇಲೆ ಪಶ್ಚಾತ್ತಾಪಪಡಬೇಡ. ಈ ಲಾಭನಷ್ಟಗಳನ್ನು ತೂಗಿ ನೋಡಿ ನಿನ್ನ ನಿರ್ಣಯ ಹೇಳಬೇಕು" ಎಂದನು.

ವಿಜಯನು ರಾಜನ ಮಾತಿಗೆ ರೇಗಿಕೊಂಡಂತೆ, "ಕೂಡಲೇ ಮುಹೂರ್ತವಿಡುವುದನ್ನು ಬಿಟ್ಟು ಈ ಅಗತ್ಯವಿಲ್ಲದ ಪ್ರಸಂಗಗಳು ಏಕೆ ?" ಎಂದು ದುರುಸಿನಿಂದ ಕೇಳಿದ.

"ಹಾಗೇನು ? ಒಳ್ಳೆಯದು. ನನ್ನ ನಿರ್ಣಯವನ್ನು ಬೇಗದಲ್ಲಿ ತಿಳಿಸುತ್ತೇನೆ" ಎಂದು ರಾಜನು ಅವನನ್ನು ಕಳುಹಿಸಿ, ಜಯನನ್ನು ತನ ಬಳಿಗೆ ಕರೆಯಿಸಿ ಅವನೊಂದಿಗೆ ಕೂಡಾ ವಿಜಯನೊಂದಿಗೆ ಹೇಳಿದುದನ್ನೇ ಹೇಳಿದನು.

ಜಯನು ಶಾಂತವಾಗಿ ರಾಜನು ಹೇಳಿದುದನ್ನೆಲ್ಲಾ ಕೇಳಿ, "ಮಹಾರಾಜರೇ, ಕೋಪದ ಸ್ವಭಾವಕ್ಕೆ ಮೂಲಕಾರಣ ಮನುಷ್ಯರಿಗಿರುವ ಬಲಹೀನತೆಯೇ. ಅಂಥವರನ್ನು ನೋಡಿ ನಾನು ಕನಿಕರ ಪಡುತ್ತೇನೆ. ಆದರೊಂದಿಗೆ ಅವರ ಮನಸ್ಸನ್ನು ಅರಿಯಲು ಪ್ರಯತ್ನಿಸುತ್ತೇನೆ. ಅದರಲ್ಲಿ ಜಯಶಾಲಿಯೂ ಆಗುತ್ತೇನೆ. ಮಣಿಮಂಜರಿಯನ್ನು ವಿವಾಹವಾಗಲು ನನಗೇನೂ ಅಭ್ಯಂತರವಿಲ್ಲ. ಅವಳನ್ನು ಸರಿದಾರಿಗೆ ತರಬಲ್ಲೆನೆಂಬ ನಂಬುಗೆ ನನಗಿದೆ" ಎಂದನು.

ಹೀಗೆ ಇಬ್ಬರನ್ನು ಬೇರೆ ಬೇರೆಯಾಗಿ ಮಾತಾಡಿಸಿಬಿಟ್ಟರೆ ಮಣಿಮಂಜರಿಯನ್ನು ಯಾರಿಗೆ ಕೊಟ್ಟರೆ ಚೆನ್ನಾಗಿರುತ್ತದೆಂದು ಗೊತ್ತಾಗಿಬಿಡುತ್ತೆ ಎಂದುಕೊಂಡ ಮಹಾರಾಜನಿಗೆ ಏನೂ ಗೊತ್ತಾಗಲಿಲ್ಲ. ಏನು ಮಾಡಲೂ ತೋರಲಿಲ್ಲ. ಜಯ ವಿಜಯ





ರೊಳಗಿನ ವ್ಯತ್ಯಾಸವು ಸ್ಪಷ್ಟವಾಗಿ ತಿಳಿಯುತ್ತಿದೆಯಾದರೂ, ಅವರಲ್ಲಿ ಯಾರಿಗೆ ಮಗಳನ್ನು ಕೊಟ್ಟರೆ ಹೆಚ್ಚು ಲಾಭವಿದೆಯೆಂಬುದು ರಾಜನಿಗೆ ಗೊತ್ತಾಗದೆ ಗಲಿಬಿಲಿಗೊಳಗಾದನು. ಆದುದರಿಂದ ಅವನು ಮಂತ್ರಿಯನ್ನು ಕರೆದು, ಎಲ್ಲವನ್ನೂ ಹೇಳಿ ಅವನ ಸಲಹೆಯನ್ನು ಕೇಳಿದನು.

ಮಂತ್ರಿ ರಾಜನು ಹೇಳಿದ ಮಾತುಗಳನ್ನೆಲ್ಲಾ ತಲೆಯಾಡಿಸುತ್ತಾ ಕೇಳಿದ ಮೇಲೆ, ರಾಜನ ಕೋರಿಕೆಯಂತೆ ತನ್ನ ಸಲಹೆ ಹೇಳುವುದರ ಬದಲಿಗೆ "ಮಹಾರಾಜರೆ, ನಿಮ್ಮ ಮಗಳ ಮದುವೆಯ ನಿರ್ಣಯವನ್ನು ನೀವೇ ಮಾಡಿಕೊಳ್ಳುವುದು ಒಳ್ಳೆಯದು. ನಿಮ್ಮ ಕುಮಾರಿಯ ಕ್ಷೇಮವೂ, ರಾಜ್ಯದ ಹಿತವೂ ನಿಮಗಿಂತ ಇನ್ನೊಬ್ಬರಿಗೆ ಚೆನ್ನಾಗಿ ತಿಳಿಯಬಲ್ಲುದೇ? ಈ ವಿಷಯದಲ್ಲಿ ಇನ್ನೊಬ್ಬರು ತಲೆ ಹಾಕುವುದು ಉಚಿತವೆನಿಸದೆಂದೇ ನನಗೆ ತೋರುತ್ತದೆ" ಎಂದು ತಾನು ತಪ್ಪಿಸಿಕೊಳ್ಳಲು ನೋಡಿದನು.

ರಾಜನು ಬಿಡದೆ, "ತಂದೆಯಾದ ಮಾತ್ರಕ್ಕೆ ಸರ್ವಜ್ಞನೆಂದುಕೊಂಡಿರೇನು? ನನ್ನಿಂದ ನಿರ್ಣಯಿಸಲು ಸಾಧ್ಯವಿಲ್ಲದ್ದರಿಂದ ತಾನೇ ನಿಮ್ಮನ್ನು ಸಲಹೆ ಕೇಳಿದೆ? ನೀವು ಮಂತ್ರಿಗಳಾಗಿರುವಾಗ ಕೇಳಿದಾಗ ಸಲಹೆ ಹೇಳಬೇಕಾದ್ದು ನಿಮ್ಮ ವಿಧಿ. ಅದನ್ನು ಅಮಲುಪಡಿಸುವುದೂ ಬಿಡುವುದೂ ನನ್ನ ಇಷ್ಟ." ಎಂದ ಮಣಿಕೇತ ಮಹಾರಾಜ.

ಮಂತ್ರಿ ತಪ್ಪಿಸಿಕೊಳ್ಳಲಾಗದೆ, "ಹಾಗಾದರೆ ನನಗೆ ತೋರುವುದನ್ನು ಹೇಳುತ್ತೇನೆ. ವಿಜಯನದು ದುಡುಕು ಸ್ವಭಾವ. ಕುಮಾರಿ ಆತನನ್ನು ನಿಮಿಷ ಕಾಲ ಕೂಡಾ ತಾಳಲಾಗದೆ ಕಷ್ಟಪಡಬಹುದು. ಜಯನು ಹಾಗಲ್ಲ, ಸಾಧುವಾಗಿ ವಿನಯಗುಣವುಳ್ಳವನು. ಅವನ ಸಹನೆಯ ಪ್ರಭಾವದಿಂದ ತಮ್ಮ ಕುಮಾರಿಯ ಗುಣವೂ ಕ್ರಮೇಣ ಶಾಂತತೆಗೆ ಬರಬಹುದು. ಆದ್ದರಿಂದ ಜಯನಿಗೆ ಕೊಟ್ಟು ಮದುವೆ ಮಾಡುವುದೇ ಒಳ್ಳೆಯದೆಂದು ನನ ಊಹೆ. ಆದರ ಮೇಲೆ ತಮ್ಮ ಇಷ್ಟ" ಎಂದನು.

ರಾಜನು ಜಯನಿಗೇ ಮಣಿಮಂಜರಿಯನ್ನು ಕೊಟ್ಟು ಮದುವೆ ಮಾಡಿದನು. ಮದುವೆಯಾದ ಮೇಲೆ ಮಣಿಮಂಜರಿಯ ಸ್ವಭಾವ ಶಾಂತತೆಗೆ ತಿರುಗುವುದಂತೂ ಹಾಗಿರಲಿ, ಇನ್ನಿಷ್ಟು ಕೋಪಕಾಳಿಯಾಗಿ ವಿಜೃಂಭಿಸಿದಳು. ಅವಳಿಗೆ ಜಯನೆಂದರೆ ಹಿಡಿಸುವಂತೆ ಕಾಣಲಿಲ್ಲ. ದಿನಾ ಗಂಡನೊಂದಿಗೆ ಜಗಳಾಡುತ್ತಿದ್ದಳು. ಜಯನು ದಿನದಿಂದ ದಿನಕ್ಕೆ ಸಾಧುವೂ ಶಾಂತನೂ ಆಗುತ್ತಬಂದನು.

ಅವರಿಬ್ಬರಿಗೆ ಯಾವಾಗ ಸ್ನೇಹಬಂಧವುಂಟಾಗುತ್ತದೋ ಆವಾಗಲೇ ಜಯನಿಗೆ ರಾಜ್ಯಾಭಿಷೇಕ ಮಾಡಬೇಕೆಂದು ಕಾಯುತ್ತಿದ್ದ ರಾಜನು ಮಂತ್ರಿಯೊಂದಿಗೆ, "ಮಂತ್ರಿಗಳೇ, ನಿಮ್ಮ ಸಲಹೆ ಸರಿಯಾಗಲಿಲ್ಲವೆಂದೇ ಕಾಣುತ್ತದೆ. ಜಯನ ಒಳ್ಳೆಯ ಗುಣಗಳನ್ನು ಮಣಿಮಂಜರಿ ಅವನನು ಕೈಲಾಗದವ

ನೆಂದು ತಿಳಿಯುವಂತೆ ಮಾಡಿದೆ. ಅಂಥವನಿಗೆ ರಾಜ್ಯಾಭಿಷೇಕ ಮಾಡಿದರೆ ರಾಜ್ಯವನ್ನು ಸರಿಯಾಗಿ ಆಳಬಲ್ಲನೆ? ಹೆಂಡತಿಯನ್ನು ದಾರಿಗೆ ತರಲಾರದವನು ದೇಶವನ್ನು ಹೇಗೆ ಸರಿದಾರಿಗೆ ತರುವನೆಂದು ಎಲ್ಲರೂ ಕೇಳಲಾರರೇ?" ಎಂದನು.

ಮಂತ್ರಿ ಸ್ವಲ್ಪ ಆಲೋಚಿಸಿ, "ಮಹಾರಾಜರೆ, ನೀವು ಈ ವಿಷಯದಲ್ಲಿ ನನ್ನ ಸಲಹೆ ಕೇಳಬಾರದೆಂದು ಮೊದಲೇ ಹೇಳಿದ್ದೆ. ತಾವು ಕೇಳಲಿಲ್ಲ. ಯಾವ ವಿಷಯವನ್ನೇ ಆಗಲಿ, ಒಬ್ಬರನ್ನು ಸಲಹೆ ಕೇಳುವಾಗ ಆ ವಿಷಯದಲ್ಲಿ ಸಲಹೆ ಹೇಳುವವನಿಗೆ ಯಾವ ವಿಧವಾದ ಸಂಬಂಧವೂ ಇಲ್ಲವೆಂಬುದನ್ನು ನೋಡಿ ಕೇಳಬೇಕು" ಎಂದನು. ರಾಜನಿಗೆ ತನ್ನ ತಪ್ಪು ತಿಳಿಯಿತು.

ಹೀಗೆ ಬೇತಾಳವು ಕಥೆಯನ್ನು ಮುಗಿಸಿ, "ರಾಜಾ, ಮಣಿಕೇತನು ತನ್ನ ಮಂತ್ರಿಯನ್ನು ಸಲಹೆ ಕೇಳಿದುದರಲ್ಲಿ ಮಾಡಿದ ತಪ್ಪು ಯಾವುದು? ರಾಜನು ತನ್ನ ಹತ್ತಿರ ಸಲಹೆ ಕೇಳಬಾರದೆಂದು ಮಂತ್ರಿ ಹೇಳಿದುದರ ಅರ್ಥವೇನು? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆಹೋದರೆ ನಿನ್ನ ತಲೆ ಒಡೆದು ಹೋಗುತ್ತದೆ" ಎಂದು ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಮಣಿಕೇತನು ತನ್ನ ಮಂತ್ರಿಯ ಸಲಹೆಯನ್ನು ಕೇಳಬಾರದಿತ್ತು ಎಂಬುದು ನಿಜವೇ. ರಾಜನು ಮಂತ್ರಿಯ ಸಲಹೆ ಕೇಳಿದುದು ಎರಡು ಸಮಸ್ಯೆಗಳ ಪರಿಹಾರವನ್ನು ಕುರಿತೇ. ಒಂದು ಸಮಸ್ಯೆ ರಾಜಕುಮಾರಿಗೆ ಗಂಡನಾಗಿ ಉಪಯೋಗಕ್ಕೆ ಬರುವವನು ಯಾರೆಂಬುದು. ನಿಜಕ್ಕೂ ಎರಡು ಸಮಸ್ಯೆಗಳಿಗೆ ಒಬ್ಬನೇ ಉಪಯೋಗಕ್ಕೆ ಬಾರದೆ ಹೋಗಬಹುದು, ಆದರೆ ಮಂತ್ರಿ ತನ್ನ ಸ್ವಾರ್ಥವನ್ನು ನೋಡಿಕೊಂಡು, ರಾಜಕುಮಾರಿಯ ಗಂಡನಾಗುವುದರೊಂದಿಗೆ; ತಾನು ಸುಲಭವಾಗಿ ಮಂತ್ರಿ ಪದವಿ ನಡೆಸಿಕೊಂಡಿರಲು ಅನುಕೂಲನಾದ ರಾಜನಾಗಬಲ್ಲವನನ್ನೇ ಸೂಚಿಸಿದನು. ಅದೇ ಮತ್ತೊಬ್ಬ ತಟಸ್ಥನಾಗಿದ್ದರೆ ಎರಡು ಸಮಸ್ಯೆಗಳನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದನು. ಈಗ ರಾಜನು ಮಾಡಿದ ತಪ್ಪೇನೆಂದರೆ, ಮಂತ್ರಿಯ ಸಲಹೆಯನ್ನು ಕೇಳಿದ್ದು ಮಾತ್ರವಲ್ಲ, ಆ ಸಲಹೆಯನ್ನು ಕುರುಡುತನದಿಂದ ಅಮಲು ಪಡಿಸಿದ್ದು! ಮಂತ್ರಿಯ ಸಲಹೆಯನ್ನು ಕುರುಡುತನದಿಂದ ಅನುಸರಿಸಿ, ತನ್ನ ಯೋಗಕ್ಷೇಮಗಳನ್ನು ಆಲೋಚಿಸಲಾಗದ ರಾಜನು ಇಂತಹ ಇಕ್ಕಟ್ಟಿನಲ್ಲಿ ಬೀಳದೆ ತಪ್ಪುವಂತಿಲ್ಲ."

ಹೀಗೆ ರಾಜನಿಗೆ ಮೌನಭಂಗವಾದಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.



# ಇನ್ನೂ ಸ್ವಲ್ಪ ತಡೀ ಬೇಕಾಯ್ತು!

ರಂಗಪುರವು ಬೆಂಕಿಯ ಅನಾಹುತಕ್ಕೆ ಗುರಿಯಾಗಿ ಎಲ್ಲಾ ಮನೆಗಳೂ ಸುಟ್ಟುಹೋದರೂ ಪಟೇಲರ ಮನೆಗೆ ಮಾತ್ರ ಏನೂ ಆಗಲಿಲ್ಲ. ಗ್ರಾಮಸ್ಥರೆಲ್ಲಾ ಕೂಡಿ ತಮಗೆ ಮನೆ ಕಟ್ಟಲು ಸಹಾಯ ಮಾಡಬೇಕೆಂದು ಪಟೇಲರನ್ನು ಕೇಳಿಕೊಂಡರು.

"ಸ್ವಲ್ಪ ತಡೆಯಿರಿ. ನನ್ನ ಮನೆ ಕೂಡಾ ಸುಟ್ಟುಹೋದ ಮೇಲೆ, ಎಲ್ಲಾ ಒಟ್ಟಿಗೆ ಸಹಾಯ ಕೇಳಲು ರಾಜನಬಳಿಗೆ ಹೋಗಬೇಕೆಂದಿದ್ದೇನೆ" ಎಂದರು ಪಟೇಲರು, ತನ್ನ ಮನೆಸುಟ್ಟು ಹೋಗದಿರುವುದಕ್ಕೆ ಚಿಂತಿಸುವವರ ಹಾಗೆ.

ಮರುದಿನ ಕಾರಣ ಏನು ಬೇಕಾದರೂ ಇರಲಿ, ಪಟೇಲರ ಮನೆಗೂ ಬೆಂಕಿ ಹಿಡಿದು ಸುಟ್ಟು ಬೂದಿಯಾಗಿಹೋಯಿತು.

ಕೂಡಲೇ ಪಟೇಲರು ಗ್ರಾಮದ ಪ್ರಮುಖರನ್ನು ತನ್ನೊಂದಿಗೆ ಕರೆದುಕೊಂಡು ಮಹಾರಾಜನ ಬಳಿಗೆ ಹೋಗಿ, ತಮ್ಮ ಗ್ರಾಮವು ಪೂರಾ ಸುಟ್ಟುಹೋಯಿತೆಂದೂ, ಪುನರ್ನಿರ್ಮಾಣಕ್ಕಾಗಿ ಆರ್ಥಿಕ ಸಹಾಯಮಾಡಬೇಕೆಂದೂ ಪ್ರಾರ್ಥಿಸಿಕೊಂಡರು.

ರಾಜನು ಸಾವಧಾನವಾಗಿ, "ಇನ್ನೂ ಎರಡು ಮೂರು ಗ್ರಾಮಗಳು ಸುಟ್ಟುಹೋಗುವವರೆಗೂ ತಡೆಯಿರಿ, ಒಂದೇಸಾರಿ ಎಲ್ಲಾ ಗ್ರಾಮಗಳಿಗೂ ಸಹಾಯ ಮಾಡುತ್ತೇನೆ" ಎಂದನು.





# ತಿರುಗಿಬಿದ್ದನ್ಯಾಯ

ಒಂದು ಊರಿನಲ್ಲಿ ರಾಮನಾಥ ಎಂಬವನ ಹತ್ತಿರ ಒಂದು ಕಪಿಲಜಾತಿಯ ದನವಿದ್ದಿತು. ಅದು ದಿನಾ ಹತ್ತು ಸೇರು ಹಾಲು ಕರೆಯುತ್ತಿದ್ದಿತು. ಆ ಹಾಲನ್ನು ಮಾರಿ ಬಂದ ಲಾಭದಲ್ಲಿ ರಾಮನಾಥನ ಜೀವನವು ಸುಖವಾಗಿ ಸಾಗುತಿತ್ತು.

ಆ ಊರಿನ ಗ್ರಾಮಾಧಿಕಾರಿಯಾದ ಭೈರವಶರ್ಮನಿಗೆ ರಾಮನಾಥನ ಕಪಿಲೆದನದ ಮೇಲೆಯೇ ಕಣ್ಣು. ಆ ದನವನ್ನು ತನಗೆ ಮಾರಿಬಿಡುವಂತೆ ರಾಮನಾಥನನ್ನು ನಾಲ್ಕೈದುಸಾರಿ ಕೇಳಿ ನೋಡಿದನು. ಆದರೆ ರಾಮನಾಥನು ಆ ದನವನ್ನು ಎಂದಿಗೂ ಮಾರಲಾರೆನೆಂದು ಸ್ಪಷ್ಟವಾಗಿ ಹೇಳಿದನು.

ಹೇಳಿದ್ದೇನೋ ಸರಿ. ಆದರೆ ರಾಮನಾಥನಿಗೆ ತನ್ನ ಮಗಳ ಮದುವೆಯ ಕಾಲ ಬಂದಾಗ, ಬೇಕಾಗುವ ಹಣಕ್ಕೆ ದಾರಿ ಕಾಣದೆ ಆ ದನವನ್ನು ಮಾರುವ ಮನಸ್ಸು ಮಾಡಲೇ ಬೇಕಾಯಿತು. ಗ್ರಾಮಾಧಿಕಾರಿಯಾದ ಭೈರವಶರ್ಮನಿಗೆ ಮಾರಬಹುದಾದರೂ ಆತ ಅದಕ್ಕೆ ತಕ್ಕ ಬೆಲೆ ಕೊಡುವವನಲ್ಲವೆಂದು ಗೊತ್ತಿತ್ತು. ಅವನನ್ನು ಬಿಟ್ಟು ಊರೊಳಗೆ ಬೇರೆ ಯಾವರಿಗೆ ಮಾರುವುದು ಸಾಧ್ಯವಿಲ್ಲದ ಮಾತು.

ಆದುದರಿಂದ ರಾಮನಾಥನು ತನ್ನ ಕಪಿಲೆದನವನ್ನು ಊರವರಾರಿಗೂ ತಿಳಿಯದಂತೆ, ಪಟ್ಟಣದಲ್ಲಿ ನಡೆಯುವ ಪಶುಗಳ ಸಂತೆಗೆ ತೆಗೆದುಕೊಂಡು ಹೋದನು. ಹಾಗೆ ರಾಮನಾಥನು ದನವನು ಸಂತೆಗೆ ಕೊಂಡುಯ್ಯುವುದನ್ನು ಭೈರವಶರ್ಮನ ಮಗ ನಾಗಶರ್ಮನು ಗಮನಿಸಿಬಿಟ್ಟನು. ಹೇಗಾದರೂ ಆ ದನವನ್ನು ಕೊಂಡುಕೊಂಡು ತನ್ನ ತಂದೆಯನ್ನು ಮೆಚ್ಚಿಸಿಬಿಡಬೇಕೆಂದು ಅವನಿಗೆ ತೋರಿತು. ಆದುದರಿಂದ ಅವನು ಯಾರಿಗೂ ಏನೂ ಹೇಳದೆ, ತಾನು ಕೂಡಾ ಪಟ್ಟಣದ ಅದೇ ಸಂತೆಗೆ ಹೋದನು.

ಸಾಯಂಕಾಲವಾಯಿತು. ರಾಮನಾಥನ ದನವು ಹೇಗೋ ತಪ್ಪಿಸಿಕೊಂಡು ಸಂತೆಯಿಂದ ಓಡಿ ಬಂದು ಯಾವುದೋ ಒಂದು ಬತ್ತದ ಗದೆಯಲ್ಲಿ ನುಗ್ಗಿ ಮೇಯತೊಡಗಿತು. ಆ ಹೊಲದ ರೈತನು ಅದನ್ನು ಹಿಡಿದು, ಎಳೆದುಕೊಂಡು ಗ್ರಾಮಾಧಿಕಾರಿಯಾದ ಭೈರವಶರ್ಮನ ಬಳಿಗೆ ಹೋದನು.

ಭೈರವಶರ್ಮನು ರಾಮನಾಥನ ದನವನು ನೋಡಿ ಆಶ್ಚರ್ಯಪಟ್ಟು, "ಏನೋ ದುರ್ಗಯ್ಯಾ, ರಾಮನಾಥನ ದನ ನಿನಗೆಲ್ಲಿ ಸಿಕ್ಕಿತು? ಇದನು

ಪಿ. ವಿ. ರಾಜ

ಹೀಗೇಕೆ ತಂದೆ?" ಎಂದು ಕೇಳಿದನು. "ಅಯ್ಯಾ, ಇದು ನನ್ನ ಗದ್ದೆಗೆ ನುಗ್ಗಿ ಬೆಳೆಯನ್ನೆಲ್ಲ ನಾಶಮಾಡಿ ಹಾಕಿತು. ತಾವೇ ನ್ಯಾಯ ಹೇಳಿ ನನಗೆ ನಷ್ಟಪರಿಹಾರ ಕೊಡಿಸಬೇಕು" ಎಂದ ದುರ್ಗಯ್ಯ ಬಾಡಿದ ಮೋರೆಯಿಂದ.

ರಾಮನಾಥನ ಮೇಲೆ ಭೈರವಶರ್ಮನಿಗೆ ಬಹಳ ಕಾಲದಿಂದ ಕೋಪವಿದ್ದಿತಷ್ಟೆ? ಅದನ್ನು ತಣಿಸಿಕೊಳ್ಳಲು ಈಗ ಒಳ್ಳೇ ಅವಕಾಶ ಸಿಕ್ಕಿತ್ತು. ಈ ಪೆಟ್ಟಿಗೆ ರಾಮನಾಥನ ಗರ್ವ ಮುರಿಯಬೇಕೆಂದುಕೊಂಡು ಅವನು ಅಲ್ಲಿ ಕೂಡಿರುವ ಹಿರಿಯರೊಂದಿಗೆ "ಪಾಪ, ಈ ಬಡರೈತ ದುರ್ಗಯ್ಯ ವರ್ಷವಿಡೀ ಕಷ್ಟಪಟ್ಟು ಬೆಳೆಸಿದ ಪೈರನ್ನು ನಾಶಮಾಡಿತು ಈ ಹಾಳುದನ. ಸ್ವಲ್ಪ ಕೂಡಾ ಬಾಧ್ಯತೆಯಿಲ್ಲದೆ ದನವನ್ನು ಹೀಗೆ ಬಿಟ್ಟದ್ದಕ್ಕೆ ರಾಮನಾಥನು ತಕ್ಕ ನಷ್ಟ ಪರಿಹಾರ ಕೊಡಬೇಕಾದುದೇ ನ್ಯಾಯ. ಆದುದರಿಂದ ರಾಮನಾಥನು ದುರ್ಗಯ್ಯನಿಗೆ ಇನ್ನು ಎರಡು ದಿನಗಳೊಳಗೆ ಎರಡು ಸಾವಿರ ರೂಪಾಯಿ ಕೊಡತಕ್ಕದ್ದು" ಎಂದನು.

"ಚೆನ್ನಾಗಿದೆ! ಸರಿಯಾದ ನ್ಯಾಯ" ಎಂದರು ಅಲ್ಲಿ ಸೇರಿದವರೆಲ್ಲಾ. ತನಗೆ ದನವನ್ನು ಮಾರದಿರುವ ರಾಮನಾಥನಿಗೆ ತಕ್ಕ ಶಾಸ್ತಿಯಾಯಿತೆಂದು ಭೈರವಶರ್ಮನು ಸಂತೋಷದಲ್ಲಿರುವ ಅದೇ ಸಮಯದಲ್ಲಿ ಅವನ ಕುಮಾರ ನಾಗಶರ್ಮನು ಓಡುತ್ತಾ ಅಲ್ಲಿಗೆ ಬಂದು, "ಅರೆ! ಈ ದನವು ಇಲ್ಲಿಗೇ ಬಂತೇ? ಇದಕ್ಕಾಗಿ ನಾನು ಊರೆಲ್ಲಾ ಹುಡುಕಿದೆನಲ್ಲ!" ಎಂದನು.

ಭೈರವಶರ್ಮ ಆಶ್ಚರ್ಯದಿಂದ "ಈ ದನಕ್ಕಾಗಿ ಊರೆಲ್ಲಾ ತಿರುಗುವ ಕರ್ಮ ನಿನಗೇನು ಬಡೀತು?" ಎಂದು ಮಗನನ್ನು ಕೇಳಿದನು.

"ಸಂತೆಯಲ್ಲಿ ರಾಮನಾಥನಿಂದ ಇದನ್ನು ಕೊಂಡುಕೊಂಡೆ" ಎಂದ ನಾಗಶರ್ಮ. ಆ ಮಾತು ಕೇಳಿದ ಕೂಡಲೇ ಭೈರವಶರ್ಮನ ಗುಂಡಿಗೆಗೆ ಕಲ್ಲು ಬಿದ್ದಂತಾಯಿತು. ರಾಮನಾಥನಿಂದ ನಾಗಶರ್ಮನು ಅದನ್ನು ಕೊಂಡುಕೊಂಡ ಮೇಲೆಯೇ ಅವನ ಅಲಕ್ಷ್ಯದಿಂದ ಅದು ಓಡಿ ಹೋಗಿ ದುರ್ಗಯ್ಯನ ಹೊಲಕ್ಕೆ ನುಗ್ಗಿತೆಂಬ ಸಂಗತಿ ಸ್ಪಷ್ಟವಾಯಿತು. ದನವು ಯಾರಿಗೆ ಸೇರಿತೋ ಅವರದೇ ಬಾಧ್ಯತೆ. ಹತ್ತು ಮಂದಿಯ ಇದಿರಿನಲ್ಲಿ ಹೇಳಿದ ನ್ಯಾಯಕ್ಕೆ ವ್ಯತ್ಯಾಸವಿಲ್ಲವಷ್ಟೆ?

ಅದರಂತೆ ದುರ್ಗಯ್ಯನಿಗೆ ನಷ್ಟಪರಿಹಾರವಾಗಿ ಎರಡು ಸಾವಿರ ರೂಪಾಯಿಗಳನ್ನು ನಾಗಶರ್ಮನೇ ಕೊಡಬೇಕಾಯಿತು. ಅಪ್ಪನ ನ್ಯಾಯ ಮಗನ ಮೂಲಕ ಅಪ್ಪನಿಗೇ ಇದಿರಾತಿರುಗಿ ಹೊಡೆದಿತ್ತು. ಭೈರವಶರ್ಮ ಹಣೆ ಚಚ್ಚಿಕೊಂಡ.



# ಮಂತ್ರಿಯ ಯುಕ್ತಿ

ಪೂರ್ವಕಾಲದಲ್ಲಿ ಕಳಿಂಗ ದೇಶದಲ್ಲೊಂದು ಕಳ್ಳರ ಗುಂಪು ಸೇರಿಕೊಂಡು ಆಗಾಗ ಕಳ್ಳತನ ಮಾಡಿಕೊಂಡಿತ್ತು, ಕಳ್ಳರನ್ನು ಹಿಡಿಯಲು ರಾಜನು ವಿಶ್ವಪ್ರಯತ್ನ ಮಾಡಿಕೊಂಡಿದ್ದುದರಿಂದ ಕಡೆಗೆ ಒಬ್ಬ ಕಳ್ಳ ಸಿಕ್ಕಿಬಿದ್ದ,

ಅವನನ್ನು ರಾಜನು ವಿಚಾರಣೆಗೆ ಗುರಿಪಡಿಸಿ ಶಿಕ್ಷೆಯ ನಿರ್ಣಯವನ್ನೂ ಮಾಡಿದನು.

ಆಗ ಮಂತ್ರಿ ಎದ್ದು, "ಇವನು ಮಾಡಿದ ಅಪರಾಧಕ್ಕೆ ಏಳು ವರ್ಷಗಳ ಕಾರಾಗೃಹ ಶಿಕ್ಷೆ ವಿಧಿಸಬಹುದು. ಆದರೂ ಈಸಾರಿ ಇವನನ್ನು, ಒಳ್ಳೆಯ ದಾರಿಯಲ್ಲಿ ನಡೆಯುವಂತೆ ಬುದ್ಧಿ ಹೇಳಿ ಬಿಟ್ಟುಬಿಡುವುದೇ ಒಳ್ಳೇದು." ಎಂದು ಹೇಳಿದನು.

ಅದು ರಾಜನಿಗೆ ಇಷ್ಟವಿಲ್ಲದಿದ್ದರೂ ಮಂತ್ರಿಯ ಮೇಲಿನ ಗೌರವದಿಂದ ಕಳ್ಳನನ್ನು ಬಿಟ್ಟುಬಿಟ್ಟನು. ಮುಂದೆ ಏಳು ದಿನಗಳೊಳಗೆ ಹತ್ತು ಮಂದಿ ಕಳ್ಳರ ಗುಂಪು ಸಿಕ್ಕಿಬಿದ್ದಿತು. ಅವರಲ್ಲಿ ಮೊದಲು ಕ್ಷಮಿಸಲ್ಪಟ್ಟ ಕಳ್ಳನೂ, ಗುಂಪಿನ ನಾಯಕನೂ ಇದ್ದರು.

ಮಂತ್ರಿಯ ಯುಕ್ತಿ ಫಲಿಸಿತ್ತು. ಬಿಡುಗಡೆಗೊಂಡು ಹೋದ ಕಳ್ಳ ತನ್ನ ಗುಂಪಿನವರನ್ನು ಸೇರಿದ್ದನು, ಮಂತ್ರಿಯ ಏರ್ಪಾಡಿನಂತೆ, ಅವನನ್ನು ರಹಸ್ಯವಾಗಿ ಅನುಸರಿಸಿದ ಗೂಢಚಾರರಿಗೆ ಕಳ್ಳರ ಇರುವಿಕೆಯ ಸ್ಥಳ ಗೊತ್ತಾಗಿ, ಇಡೀ ಗುಂಪೇ ಸಿಕ್ಕಿಬಿತ್ತು.

ಸಭೆಯವರೆಲ್ಲ ಮಂತ್ರಿಯನ್ನು ಮೆಚ್ಚಿಕೊಂಡರು.





# ನಿಜಮಾನವರು

ಒಂದಾನೊಂದು ಗ್ರಾಮದಲ್ಲಿ ಕನಕದಂತನೆಂಬ ಧನಿಕನಿದ್ದನು. ಧನಿಕನಾದರೂ ಅವನ ಧನದಾಹಕ್ಕೆ ಇತಿಮಿತಿ ಇರಲಿಲ್ಲ. ತನ್ನ ಸಂಪತ್ತನ್ನು ಹೆಚ್ಚು ಮಾಡಲು ಎಂತಹ ಘೋರ ಕಾರ್ಯಗಳಿಗೂ ಹೇಸುತ್ತಿರಲಿಲ್ಲ. ಊರೊಳಗೆ ಮಾತ್ರವಲ್ಲದೆ ಸುತ್ತುಮುತ್ತಲಿನ ಊರುಗಳಲ್ಲಿಯ ಅನೇಕ ಕುಟುಂಬಗಳು ಅವನ ಧನದಾಹದ ಮೂಲಕವಾಗಿ ನಾಶನವಾಗಿದ್ದುವು. ಇಡಿಯ ಗ್ರಾಮ ಗ್ರಾಮವನ್ನೇ ಹಿಂಡಿ ಹೀರಿಹಿಪ್ಪೆ ಮಾಡುವಷ್ಟರಮಟ್ಟಿಗೆ ಅವನ ಧನದಾಹವಿತ್ತು.

ಆದರೆ ಅವನ ಹೆಂಡತಿ ಸುಮತಿ ಮೋಸಮಾಯೆಗಳನರಿಯದ ಉತ್ತಮ ಗೃಹಿಣಿ. ಸುತ್ತಲಿನ ಮಾನವರ ಮೇಲೆ ಅವಳಿಗೆ ತುಂಬ ಅಭಿಮಾನವಿತ್ತು. ಕಷ್ಟನಷ್ಟಗಳಿಂದ ಆರ್ತರಾಗಿರುವವರನ್ನು ನೋಡಿ ಅವಳು ಕರಗಿ ಹೋಗುತ್ತಿದ್ದಳು. ಗಂಡನಿಗೆ ತಿಳಿಯದಂತೆ ಅವಳು ಮಾಡುವ ದಾನಧರ್ಮಗಳಿಂದಲೇ ಗ್ರಾಮವು ಜೀವ ಹಿಡಿದುಕೊಂಡಿದ್ದಿತು.

ತನ್ನ ಗಂಡನ ಪ್ರವರ್ತನೆಗಳು ಅವಳಿಗೆ ಸ್ವಲ್ಪವೂ ಹಿಡಿಸುತ್ತಿದ್ದಿಲ್ಲ." ನಮಗೆ ಇರುವುದು ಸಾಲದೇನ್ರೀ ? ಇನ್ನೆಷ್ಟು ಕಾಲಾ ಅಂತ ಹೀಗೆ ಮನುಷ್ಯರ ರಕ್ತ ಕುಡಿಯುವಿರೋ ? ದಾನಧರ್ಮಗಳಿಗೆ ಸ್ವಲ್ಪ ಬುದ್ಧಿ ಹರಿಯಬಿಡೀ " ಎಂದು ಆಗಾಗ ಗಂಡನ ಗುಣವನ್ನು ಬದಲಾಯಿಸಲು ನೋಡುತ್ತಿದ್ದಳು. ಹೆಂಡತಿಯ ಮೇಲೆ ಅವನಿಗೆ ಪ್ರೇಮಾನುರಾಗಗಳೆಲ್ಲ ಇದ್ದರೂ ಅವಳ ಮಾತುಗಳನ್ನು ಮಾತ್ರ ಅವನು ಧೂಳಿನ ಹಾಗೆ ಕೊಡವಿಕೊಳ್ಳುತ್ತಿನು.

ಹೀಗಿರುವಾಗ ಎಲ್ಲಿಂದಲೋ ದಯಾನಿಧಿ ಎಂಬ ಯೋಗಿಯೊಬ್ಬನು ಆ ಪ್ರಾಂತಕ್ಕೆ ಬಂದು ಗ್ರಾಮದ ಹೊರಭಾಗದಲ್ಲಿರುವ ಕೆರೆಯ ಬದಿಯ ಎತ್ತರ ಪ್ರದೇಶದಲ್ಲಿ ಕುಟೀರ ನಿರ್ಮಿಸಿ ಒಂದು ಆಶ್ರಮವನ್ನಾಗಿ ಮಾಡಿಕೊಂಡನು. ಆಶ್ರಮದ ಬದಿಯಲ್ಲಿ ಹಣ್ಣಿನ ಗಿಡಗಳನ್ನು ನೆಡಿಸಿದನು. ಸ್ವಲ್ಪ ಕಾಲದಲ್ಲಿ ಅವುಗಳಲ್ಲಿ ಒಂದು ಮಾವಿನ ಮರವು ಮೊದಲನೇ ಬಾರಿ ಹಣ್ಣು ಬಿಟ್ಟಿತು. ಆ ಮರದ ಹಣ್ಣುಗಳನ್ನು ಕುರಿತು ಜನರು ವಿಚಿತ್ರವಾಗಿ ಹೇಳಿಕೊಳ್ಳುತ್ತಿದ್ದರು. ಅದಕ್ಕೆ ಕಾರಣವೇನೆಂದರೆ, ಆ ಮರದ ಬುಡಕ್ಕೆ ಹೋಗಿ ಅದರ ಹಣ್ಣನ್ನು ಕೊಯಿದು ತಿಂದವನು ತನ್ನ ಸ್ವಭಾವಕ್ಕೆ ತಕ್ಕ ವಿಧವಾಗಿ ಯಾವುದೋ ಒಂದು

ಕೆ. ಸದಾನಂದ

ಪ್ರಾಣಿಯಾಗಿ ಬದಲಾಯಿಸಿಬಿಡುವನು. ಮರದ ಕೆಳಗಿನಿಂದ ಈಚೆಗೆ ಬಂದ ಕೂಡಲೇ ಎಂದಿನಂತೆ ಮನುಷ್ಯನಾಗಿ ಬಿಡುತ್ತಾನೆ!

ಅನೇಕ ಜನರಿಗೆ ಹೀಗಾಯಿತು. ಇದನ್ನು ಕಣ್ಣಾರೆ ಕಂಡವರೂ ಅನೇಕರು. ಈ ವಿಚಿತ್ರವನ್ನು ನೋಡಲು ಕನಕದಂತನೂ ಅವನ ಹೆಂಡತಿಯೂ ಯೋಗಿಯ ಆಶ್ರಮಕ್ಕೆ ಹೋದರು. ಅಲ್ಲಿ ಅನೇಕ ಜನರು ಗುಂಪು ಕೂಡಿ ಆ ಮಾವಿನ ಮರದ ಬುಡದಲ್ಲಿ ನಡೆಯುವ ಅದ್ಭುತವನ್ನು ನೋಡುತ್ತಿದ್ದರು.

ಎಲ್ಲರೂ ನೋಡುತ್ತಿದ್ದಂತೆಯೇ ಪ್ರಾಯ ಸಂದ ವೀರಯೋಧನೊಬ್ಬ, ಒಂದು ಕಾಲದಲ್ಲಿ ಸೈನಿಕನಾಗಿ ಅನೇಕ ಯುದ್ಧಗಳನ್ನು ಮಾಡಿದವನು, ಆ ಮರದ ಕೆಳಗೆ ಹೋಗಿ ಒಂದು ಹಣ್ಣು ಕೊಯಿದು ತಿಂದು, ಹೆಬ್ಬುಲಿಯಾಗಿ ಬದಲಾಯಿಸಿ, ಗಾಂಢ್ರುಗುಡಿಸಿ ಜನರ ಮೇಲೆ ಹಾರಿ, ಕೂಡಲೇ ಮನುಷ್ಯನಾದನು. ಆ ಅಲ್ಪ ವೇಳೆಯೊಳಗೆ ಎಲ್ಲರೂ ಹೋ ಎಂದು ಹೆದರಿ ಓಡಿ ಗಲಗಲನೆ ನಗುತ್ತಾ ನಿಂತರು ಮತ್ತೆ!

ಅದೇ ವಿಧವಾಗಿ ಆ ಗ್ರಾಮದ ಮಾಸ್ತರೊಬ್ಬರು ಹಣ್ಣು ತಿಂದು ದನವಾಗಿ ಈಚೆಗೆ ಬಂದು ಮನುಷ್ಯರಾದರು. ತನ್ನ ಶತ್ರುಗಳ ಧಾನ್ಯದ ಕಣಜಕ್ಕೆ ಬೆಂಕಿ ಹಚ್ಚಿದವನೊಬ್ಬ ಕಪ್ಪು ಸರ್ಪವಾಗಿ ಮಾರ್ಪಟ್ಟು ಭುಸುಗುಟ್ಟಿದ! ಕನಕದಂತನ ಸೇವಕನೊಬ್ಬ ನಾಯಿಯ ರೂಪ ತಾಳಿ ಭೌಭೌ ಎಂದು ಬೊಗಳಿಕೊಂಡೇ ಈಚೆಗೆ ಬಂದ. ಆಗದಹೋಗದವರಿಗೆ ಬರಡು ವೇದಾಂತ ಕೊಚ್ಚುವ ಹರಟೆ ಮಲ್ಲನೊಬ್ಬ ಕತ್ತೆಯಾಗಿ ಬದಲಾಯಿಸಿ ಓಂಢ್ರುಗೊಟ್ಟು ಓಡಿಬಂದ. ಹೀಗೆ ಅನೇಕಮಂದಿಗೆ ನಡೆದ ಮೇಲೆ ಗ್ರಾಮಸ್ಥರಲ್ಲಿ ಅನೇಕಮಂದಿ ತಮ್ಮ ನಿಜವಾದ ಸ್ವಭಾವ ತಿಳಿದುಕೊಳ್ಳಬೇಕೆಂದಿದ್ದರೂ, ಅದು ಪ್ರಪಂಚಕ್ಕೆ ತಿಳಿಯಲು ಇಷ್ಟವಿಲ್ಲದೆ ಹಣ್ಣು ತಿನ್ನಲು ಹೆದರಿದರು.

ತಾನು ಕೂಡಾ ಮರದ ಕೆಳಗೆ ಹೋಗಿ ಹಣ್ಣು ತಿಂದು ಹೇಗೆ ಬದಲಾಗುವೆನೋ ತಿಳಿದುಕೊಳ್ಳಬೇಕೆಂದು ಕನಕದಂತನಿಗೆ ಕುತ್ತಿಗೆಯವರೆಗೆ ಕುತೂಹಲವಿತ್ತು. ಆದರೆ ತನ್ನಂತಹ ದೊಡ್ಡ ಮನುಷ್ಯ



ಊರೊಳಗೆ ಪ್ರಭಾವವುಳ್ಳವನು, ಯಾವ ಹಂದಿಯೋ ಕತ್ತೆಯೋ ಆಗಿಬಿಟ್ಟರೆ ಹತ್ತು ಮಂದಿಯ ಮುಂದೆ ಅಲ್ಪನಾಗಿ ಬಿಡುವುದಿಲ್ಲವೆ? ಆದುದರಿಂದ ಅವನು ರಹಸ್ಯವಾಗಿ ಹಣ್ಣು ತಿನ್ನಬೇಕೆಂದು ನಿಶ್ಚಯಿಸಿ ಕೊಂಡನು.

ಆ ದಿನ ಅರ್ಧರಾತ್ರಿಯಲ್ಲಿ ಅವನು ತನ್ನ ಹೆಂಡತಿ ಸುಮತಿಯನ್ನು ಕರೆದುಕೊಂಡು ಆಶ್ರಮಕ್ಕೆ ಹೋದನು. ಇಬ್ಬರೂ ಮಾವಿನ ಮರದ ಕೆಳಗೆ ಹೋಗಿ ಒಂದೊಂದು ಹಣ್ಣು ಕೊಯಿದುಕೊಂಡು ತಿಂದರು. ಸುಮತಿಯಲ್ಲಿ ಯಾವ ಬದಲಾವಣೆಯೂ ಬರಲಿಲ್ಲ. ಆದರೆ ಕನಕದಂತನು ಬ್ರಹ್ಮರಾಕ್ಷಸನಾಗಿ ಬದಲಾಯಿಸಿ "ಹೊ! ನರವಾಸನೆ! ನರವಾಸನೆ! ಹಸಿವೆ! ಹಸಿವೆ!" ಎಂದು ಕೂಗುತ್ತಾ ಸುಮತಿಯನ್ನು ಹಿಡಿಯಲು ಹಾಯ್ದನು. ಸುಮತಿ ವಿಪರೀತ ಭಯಪಟ್ಟು ಅವನಿಗೆ ಸಿಕ್ಕದಂತೆ ಓಡಿದಳು. ಅವಳ ಹಿಂದೆಯೇ ಕನಕದಂತನೂ ತನ ಯಥಾ ರೂಪದಲ್ಲಿ "ನಿಲ್ಲೇ! ಹೆದರ ಬೇಡ್ವೇ! ನನಗೇನಾಗಿಲ್ಲಾ!" ಎಂದು ಕೂಗುತ್ತಾ ಓಡಿದನು. ಆ ಕೂಗನ್ನು ಅವಳು ಕೇಳಿಸಿಕೊಳ್ಳದೆ ಅತಿವೇಗವಾಗಿ ಹೋಗಿ ಮನೆಬಾಗಿಲು ಹಾಕಿಕೊಂಡಳು.

ಆ ಮೇಲೆ ಅವಳು ಗಂಡನೊಂದಿಗಿರಲು ಸುತರಾಂ ನಿರಾಕರಿಸಿಬಿಟ್ಟಳು. ಕನಕದಂತನು ಆಶ್ರಮಕ್ಕೆ ಹೋಗಿ ಯೋಗಿ ದಯಾನಿಧಿಯ ಕಾಲಿಗೆ ಬಿದ್ದು ಆತನನ್ನು ಮನೆಗೆ ಕರೆದುಕೊಂಡುಬಂದನು.

ದಯಾನಿಧಿ ಹೊರಟುನಿಂತ ಕನಕದಂತನ ಹೆಂಡತಿ ಯೊಂದಿಗೆ, "ಅಮ್ಮಾ, ನಿನಗೆ ನಿನ್ನ ಗಂಡನಿಂದ ಯಾವ ಭಯವೂ ಇಲ್ಲ. ನಿನ್ನ ಗಂಡನಲ್ಲಿ ರಾಕ್ಷಸನ ಲಕ್ಷಣಗಳಿವೆಯೇ ಹೊರತು ಅವನು ನಿಜವಾಗಿಯೂ ರಾಕ್ಷಸನಲ್ಲ, ಮಾನವನೇ. ಆ ಮರದ ಕೆಳಗೆ ಹಣ್ಣು ತಿಂದಾಗ ಮಾತ್ರ ಅವನ ರಾಕ್ಷಸ ಗುಣ ರೂಪ ತಾಳಿ ಆಗಲೇ ಮಾಯವಾಯಿತು. ಆ ಮರವನ್ನು ಕಡಿಸಿ ಬಿಡುತ್ತೇನೆ. ಇನ್ನು ಮೇಲೆ ನಿನ್ನ ಗಂಡನ ರೂಪ ಮಾರ್ಪಡುವುದಿಲ್ಲ. ನೀನು ಎಂದಿನಂತೆ ನೆಮ್ಮದಿ ಯಾಗಿರಬಹುದು." ಎಂದು ಹೇಳಿ ಕನಕದಂತನೊಂದಿಗೆ "ಅಪ್ಪಾ, ಪ್ರಾಣಿಗಳಲ್ಲಿ ಉತ್ತಮನು ಮನುಷ್ಯ ಪ್ರಾಣಿ. ಮನುಷ್ಯನಾಗಿ ಹುಟ್ಟಿದವನು ಮನುಷ್ಯ ಗುಣಗಳಿಂದಲೇ ಬದುಕಬೇಕು. ಅದನ್ನು ಬಿಟ್ಟು ನೀನು ನರಭಕ್ಷನಂತೆ ಬಾಳುವವನೆಂದರೆ ತುಂಬಾ ನಾಚಿಕೆಗೇಡು." ಎಂದನು.

ಕನಕದಂತನಿಗೆ ಹೇಗೂ ನಾಚಿಕೆಯಾಗಿತ್ತು. ಆ ಮೇಲೆ ಅವನು ತನ್ನ ಕಳಂಕ ಕಳೆದುಕೊಳ್ಳುವವ ನಾಗಿ, ಹೆಂಡತಿ ಹೇಳಿದಂತೆ ಕೇಳುತ್ತ ಧರ್ಮಿಷ್ಠನಾಗಿ ಒಳ್ಳೆಯ ಹೆಸರು ಗಳಿಸಿದನು. ಸುಮತಿಯೂ ಗಂಡ ನೊಂದಿಗೆ ಅನ್ಯೋನ್ಯಳಾಗಿದ್ದಳು.



# ಅಧ್ಯಕ್ಷರ ಬುದ್ಧಿವಂತಿಗೆ

ಜೀವಕಾರುಣ್ಯ ಸಂಘದ ಅಧ್ಯಕ್ಷರಿಗೆ ಒಂದು ಸಮಾವೇಶವನ್ನು ಏರ್ಪಡಿಸುವುದು ದೊಡ್ಡ ಸಮಸ್ಯೆಯಾಗಿತ್ತು. ಸಮಾವೇಶವಿಟ್ಟರೆ ಯಾರೂ ಬಾರರು.

ಅದಕ್ಕಾಗಿ ಒಂದುದಿನ ಜಮೀನ್ದಾರರೇ ಸಭೆಗೆ ಅಧ್ಯಕ್ಷತೆ ವಹಿಸುವರೆಂದು ಸುದ್ದಿ ಹರಡಿಸಿದರು. ಅದುದರಿಂದ ಸಭಿಕರೆಲ್ಲಾ ಬಂದರು. ಆದರೆ ಜಮೀನ್ದಾರರು ಬರದಿರುವುದನ್ನು ನೋಡಿ ಸಭಿಕರು ಮೆಲ್ಲನೆ ಎದ್ದು ಹೋಗುವ ಪ್ರಯತ್ನದಲ್ಲಿದ್ದರು.

ಅದನ್ನು ತಿಳಿದು ಅಧ್ಯಕ್ಷರು, "ಮಿತ್ರರೇ, ನಿಮ್ಮಲ್ಲಿ ಯಾರೋ ಒಬ್ಬರು ಬಾಡಿಗೆ ಗಾಡಿಯಲ್ಲಿ ಬಂದು ಬಾಡಿಗೆ ಹಣ ಕೊಡದೆ ಅವನನ್ನು ಹೊರಗೆ ನಿಲ್ಲಿಸಿದ್ದಾರಂತೆ. ಜೀವಕಾರುಣ್ಯ ಸಂಘದ ಸದಸ್ಯರಲ್ಲಿ ಕುದುರೆಯ ಮೇಲೂ, ಗಾಡಿಯವನ ಮೇಲೂ ಇಷ್ಟೊಂದು ನಿರ್ದಯರಾಗಿರುವವರು ಇರಲಾರರೆಂದು ಭಾವಿಸುವೆನು. ಯಾರಾದರೂ ಮರೆತು ಹಾಗೆ ಮಾಡಿದ್ದರೆ ಅವರು ಹೊರಗೆ ಹೋಗಿ ಗಾಡಿಯವನಿಗೆ ಬಾಡಿಗೆ ಕೊಟ್ಟು ಬರಲಿ" ಎಂದರು.

ಸಮಾವೇಶ ಮುಗಿಯುವವರೆಗೂ ಯಾರೂ ಏಳಲಿಲ್ಲ.





# ಶೀಲಪರೀಕ್ಷೆ

ಅನೇಕ ವರ್ಷಗಳ ಹಿಂದೆ ಪ್ರತಾಪಗಢವೆಂಬ ಸಂಸ್ಥಾನಾಧಿಪತಿಯಾದ ರುದ್ರನಾರಾಣನ ಮಗ ರವಿನಾರಾಯಣನು ಸುಂದರನೆಂದೂ ಬುದ್ಧಿವಂತನೆಂದೂ ಹೆಸರು ಪಡೆದಿದ್ದನು. ಅಂಥವನಿಗೆ ಹೆಣ್ಣು ಕೊಡಲು ಎಷ್ಟೋ ಜಮೀನ್ದಾರರು ಕಾದಿದ್ದರು. ಕಡೆಗೆ ಸುಖಿಸಾಗರ ಗ್ರಾಮದ ಜಮೀನ್ದಾರನ ಮಗಳು ಸುಲತಾದೇವಿಯೊಂದಿಗೆ ಅವನ ಮದುವೆಯಾಯಿತು. ಪ್ರತಾಪಗಢಕ್ಕೂ ಸುಖಿಸಾಗರ ಗ್ರಾಮಕ್ಕೂ ಬಹು ದೂರವಿತ್ತು. ಹೋಗಿಬರುವ ಮಾರ್ಗ ಸೌಕರ್ಯವಾಗಿರಲಿಲ್ಲ. ಮಧ್ಯದಲ್ಲೊಂದು ಅರಣ್ಯವೂ ಅಡ್ಡವಾಗಿತ್ತು. ಆ ಪ್ರಾಂತದಲ್ಲಿ ಸಾಗರದಿಘೀ ಎಂಬ ಕೆರೆಯೊಂದಿತ್ತು. ಅದರ ಸುತ್ತಲೂ ಮಾವಿನ ತೋಪುಗಳಿದ್ದುವು. ಈ ಪ್ರದೇಶವೆಲ್ಲಾ ದಾರಿಬಡಕ ಕಳ್ಳರಿಗೆ ಪ್ರಸಿದ್ಧವಾಗಿತ್ತು.

ಸುಲತೆ ರವಿನಾರಾಯಣನನ್ನು ಮದುವೆಯಾಗಿ ಸಂಸಾರಕ್ಕೆ ಬಂದು, ತನ ಸೌಜನ್ಯತೆಯಿಂದ ಎಲ್ಲರ ಅಭಿಮಾನಕ್ಕೂ ಪಾತ್ರಳಾದಳು. ಗಂಡನ ಅಪಾರ ಪ್ರೇಮಕ್ಕೂ ಪಾತ್ರಳಾಗಿ ತಾನೂ ಸಂತೋಷವಾಗಿದ್ದಳು. ಹೀಗಿರುವಾಗ ಒಂದು ದಿನ ಸುಖಿಸಾಗರದ ದಿವಾನನು ಕೆಲವು ಮಂದಿ ಆಳುಗಳೊಂದಿಗೆ ಬಂದು ರುದ್ರನಾರಾಯಣನನ್ನು ನೋಡಿ, ಸಲತೆಯ ತಾಯಿಗೆ ತುಂಬಾ ಕಾಯಿಲೆಯಾಗಿದೆಯೆಂದೂ, ಸುಲತೆಯನ್ನು ತಮ್ಮೊಂದಿಗೆ ಕೆಲವು ದಿನಗಳ ಮಾತಿಗೆ ತೌರಿಗೆ ಕಳುಹಿಸಿಕೊಡಬೇಕೆಂದೂ ಕೇಳಿಕೊಂಡನು.

ಸುಖಿಸಾಗರದ ದಿವಾನನೇ ಬಂದು ಹೀಗೆ ಹೇಳಿದುದರಿಂದ ಅಲ್ಲಗಳೆಯಲು ರುದ್ರನಾರಾಯಣನಿಗೆ ಸಾಧ್ಯವಾಗಲಿಲ್ಲ. ಸುಲತೆ ತೌರಿಗೆ ಹೊರಡಲು ಅನುಮತಿಕೊಟ್ಟು, ತಕ್ಕ ಏರ್ಪಾಡುಗಳನ್ನೂ ಮಾಡಿಸಿದನು. ದಾರಿಯಲ್ಲಿ ಕಳ್ಳರ ಭಯವಿರುವುದರಿಂದ ಕಳ್ಳರುಬಿದ್ದರೆ ಹೋರಾಡಬಲ್ಲಂತಹ ಸಾಯುಧರಾದ ವೀರರನ್ನು ಕೂಡಾ ಅವರೊಂದಿಗೆ ಹೊರಡಲು ಏರ್ಪಾಡು ಮಾಡಿದನು.

ಪ್ರಯಾಣವು ಸುಗಮವಾಗಿಯೇ ಸಾಗಿತು. ಸುಲತೆ ಮೇನಾದ ಒಂದು ಬಾಗಿಲನ್ನು ತೆರೆದು ದಾರಿಯಲ್ಲಿ ಕಾಣುವ ಪ್ರಕೃತಿ ಸೌಂದರ್ಯವನ್ನು ನೋಡುತ್ತ ಆನಂದವಾಗಿದ್ದಳು. ಮಧ್ಯಾಹ್ನ ಊಟದ ಹೊತ್ತಿನಲ್ಲಿ ದೊಡ್ಡದೊಂದು ಆಲದಮರದ ಬುಡದಲ್ಲಿ ಆಶ್ರಯ ಹೂಡಿದರು. ಎಲ್ಲರೂ ಊಟ

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು

ಮುಗಿಸಿ ಒಂದು ಗಂಟೆಹೊತ್ತು ವಿಶ್ರಾಂತಿ ಪಡೆದು ಕೊಂಡ ಮೇಲೆ ಮತ್ತೆ ಪ್ರಯಾಣಹೊರಟರು.

ಸಾಗರ ದಿಘೀಕೆರೆ ದೂರದಲ್ಲಿ ಕಾಣಲು ತೊಡಗಿ ದಾಗ ಸೂರ್ಯಾಸ್ತವಾಯಿತು. ಆ ದೌರ್ಭಾಗ್ಯದ ಪ್ರದೇಶವನ್ನು ನೋಡಿದ ಕೂಡಲೇ ಸುಲತೆಯಲ್ಲಿ ಏನೋ ಆಂದೋಳನವೆದ್ದಿತು. ತನ್ನ ತಂದೆಯೂ ಮಾವಯ್ಯನವರೂ ಕಳುಹಿಸಿದ ಅಂಗರಕ್ಷಕರ ನಾಯಕ ನನ್ನು ನೋಡಿ ತನ್ನಲ್ಲಿ ಉಂಟಾದ ಭಯವನ್ನು ಹೇಳಿಕೊಂಡಳು.

"ಏನೂ ಹೆದರಬೇಕಾಗಿಲ್ಲವಮ್ಮಾ. ದರೋಡೆ ಕೋರರುಬಂದರೆ ಅವರನ್ನು ಜೀವದೊಂದಿಗೆ ಬಿಡು ವವರು ನಾವಲ್ಲ. ಅವರೊಂದಿಗೆ ಹೋರಾಟ ನಮಗೆ ಅಭ್ಯಾಸವಾದುದುದೇ." ಎಂದು ಅವರು ಸುಲತೆಗೆ ಧೈರ್ಯ ಹೇಳಿದರು.

ಆದರೆ ಅವರು ಧೈರ್ಯ ಹೇಳಿದಂತೆ ನಡೆಯಲಿಲ್ಲ. ಅಸಂಖ್ಯಾಕರಾದ ದರೋಡೆಗಾರರು "ಹರಹರ!" ಎಂದು ಭಯಂಕರವಾಗಿ ಕೂಗುತ್ತಾ ಬಿದಿರುಗಳುಗಳ ಮೇಲಿಂದ ಅತಿವೇಗವಾಗಿ ಹಾರಿಹಾರಿ ಬಂದು, ಕ್ರೂರ ತನದಿಂದ ಹೋರಾಡಿ, ಅನೇಕ ಅಂಗರಕ್ಷಕರನ್ನು ಕೊಂದರು. ಮತ್ತೆ ಕೆಲವು ಅಂಗರಕ್ಷಕರು ಗಾಯ ಗೊಂಡು ಬಿದ್ದರು. ಉಳಿದವರು ಓಡಿಹೋದರು. ಸುಲತೆಯ ಮೇನಾ ದಿಕ್ಕಿಲ್ಲದಾಯಿತು.

ಕತ್ತಲೆಯಾಯಿತು. ಕಳ್ಳರು ದೀವಟಿಗೆಗಳನ್ನು ಬೆಳಗಿಸಿ ಮೇನಾವನ್ನು ಸಮೀಪಿಸಿದರು. ಸುಲತೆ ತನ ಶರೀರದಲ್ಲಿದ್ದ ಆಭರಣಗಳನ್ನು ತೆಗೆದು ಮೂಟೆ ಕಟ್ಟಿ ಕಳ್ಳರಕಡೆಗೆ ಬಿಸುಟಳು.

"ಮೇನಾವನ್ನು ಎತ್ತಿಕೊಂಡು ನಮ್ಮ ಸ್ಥಳಕ್ಕೆ ನಡೆಯಿರಿ." ಎಂದು ಕಳ್ಳರನಾಯಕನು ಅಪ್ಪಣೆ ಮಾಡಿದನು. ನಾಲ್ಕುಮಂದಿ ಕಳ್ಳರು ಮೇನಾ ಎತ್ತಿ ಕೊಂಡು ಸಾಗಲು, ಒಬ್ಬ ಕಳ್ಳ ಅದರ ಹಿಂದೆ ನಡೆದನು. ಆ ಕಳ್ಳ ತನ್ನಕಡೆಗೆ ಆಶೆಯಿಂದ



ನೋಡುವುದನ್ನು ಗಮನಿಸಿ ಸುಲತೆ ಅವನ ಮೇಲೊಂದು ಕಿರುನಗುವನ್ನು ಸೂಸಿದಳು. ಹಾಗು ಚಿಕ್ಕದೊಂದು ನಗವನ್ನು ತೆಗೆದು ಅವನಿಗೆ ಕೊಟ್ಟಳು. ಅವನು ಅದನ್ನು ಅತ್ಯಾತುರದಿಂದ ಜೇಬಿಗೆ ಹಾಕಿ ಕೊಂಡನು. ಆಮೇಲೆ ಅವಳು ಅವನಿಗೊಂದು ಬೀಡಾವನ್ನು ಕೊಟ್ಟು ಒಂದನ್ನು ತಾನು ಬಾಯಿಗೆ ಹಾಕಿಕೊಂಡಳು. ಕಳ್ಳ ಆ ಬೀಡಾವನ್ನು ಜಗಿದ ಮರುಕ್ಷಣವೇ ತಲೆ ತಿರುಗಿ ಬಿದ್ದು ಸದ್ದಿಲ್ಲದೆ ಸತ್ತು ಹೋದನು.

ಅದನ್ನು ನೋಡಿ ಮೇನಾ ಹೊರುವವರು ಕೂಡಲೇ ಮೇನಾವನ್ನು ಕೆಳಗಿಟ್ಟು ತಮ್ಮ ಹಿಂದೆ ಬರುವವನು ಏಕೆ ಬಿದ್ದನೆಂದು ನೋಡಲು ಹೋದರು. ಎಲ್ಲರೂ ಆಶ್ಚರ್ಯಪಡುತ್ತ ಸತ್ತವನ ಸುತ್ತಲೂ ಕೂಡಿದರೆಂದೂ, ಮೇನಾವನ್ನು ಗಮನಿಸುವವ ರಾರೂ ಇಲ್ಲವೆಂದೂ ತಿಳಿದು ಸುಲತೆ ಅಡೆಯುಬದಿ ಯಿಂದ ಮೇನಾದಿಂದಿಳಿದು ಹೊರಬಿದ್ದು ಮುಳ್ಳು



ಕಲ್ಲುಗಳನ್ನು ಲಕ್ಷ್ಯಮಾಡದೆ ದಾರಿಯಿಲ್ಲದ ಅರಣ್ಯದೊಳಗೆ ವೇಗವಾಗಿ ಜಾರಿಕೊಂಡಳು.

ಅವಳು ಕಾಲು ಒಯ್ದ ಹಾಗೆ ಅರಣ್ಯದೊಳಗೆ ಬಹುದೂರ ಓಡಿ ಒಂದು ಮರದ ಮೇಲೆ ಹತ್ತಿ, ಸೀರೆಯ ಸೆರಗಿನಿಂದ ತಾನು ಕೆಳಗೆ ಬೀಳದ ಹಾಗೆ ಕಟ್ಟಿಕೊಂಡು, ಹಾಗೆಯೇ ಕುಳಿತು ಅಲ್ಲಿಯೇ ಮೂರ್ಛೆಹೋದಳು.

ಸುಲತೆ ತೌರುಮನೆಯಿಂದ ಗಂಡನ ಮನೆಗೆ ಬರುವಾಗ ವಿಷದ ಬೀಡಾವನ್ನು ಇಟ್ಟುಕೊಂಡಿದ್ದಳು. ಕಳ್ಳರಿರುವ ದಾರಿಯಲ್ಲಿ ಮಾನಹಾನಿಯಾಗುವ ಸಂದರ್ಭಬಂದರೆ ಅವು ಉಪಯೋಗಕ್ಕೆ ಬರುತ್ತವೆ. ಈಸಾರಿ ಹೀಗೆ ಉಪಯೋಗವಾಯಿತು.

ದೊಂಬಿನಡೆದ ಸ್ಥಳದಲ್ಲಿ ಕಳ್ಳರು ಸತ್ತುಹೋದ ತಮ್ಮವರನ್ನೂ, ಗಾಯಗೊಂಡವರನ್ನೂ ಹೊತ್ತುಕೊಂಡು ಹೋಗಿಬಿಟ್ಟರು. ಅವರು ಹೋದ ಮೇಲೆ ಸುಲತೆಯೊಂದಿಗೆ ಬಂದವರಲ್ಲಿ ಓಡಿಹೋದವರು ಮೆಲ್ಲಮೆಲ್ಲನೆ ಒಬ್ಬೊಬ್ಬರಾಗಿ ಹಿಂದಿರುಗಿಬಂದರು. ಆ ಪರಿವಾರದಲ್ಲಿ ಮುಖ್ಯಸ್ಥರೆಲ್ಲ ಸತ್ತುಹೋಗಿದ್ದರು. ಗಾಯಗೊಂಡವರಿಗೆ, ಅಲ್ಪ ಸ್ವಲ್ಪ ಗಾಯ ಪಟ್ಟವರು ಚಿಕಿತ್ಸೆ ಮಾಡಿಕೊಳ್ಳುತ್ತಿದ್ದರು.

ಅಂತೂ ಬೆಳಗಾಯಿತು. ದಾರಿಯಲ್ಲಿ ನಡೆದ ದರೋಡೆಯನ್ನು ಕುರಿತು, ಸಲತೆಯ ಜಾಡು ತಿಳಿಯದಿರುವುದನ್ನು ಕುರಿತು ಇತ್ತ ಪ್ರತಾಪಗಡದವರೆಗೂ, ಅತ್ತ ಸುಖಸಾಗರದವರೆಗೂ ಸುದ್ದಿ ಸೇರಿತು.

ಸುಲತೆ ಮರಹತ್ತಿದ ಸ್ಥಳಕ್ಕೆ ಸಮೀಪದಲ್ಲಿ ಹರಿದಾಸನೆಂಬ ವೈಷ್ಣವ ಸಾಧುವಿನ ಆಶ್ರಮವಿದ್ದಿತು. ಅವನು ಪೂಜೆಗಾಗಿ ಹೂಗಳನ್ನು ಕೊಯ್ಯಲು ಬಂದು, ಮರದ ಮೇಲಿರುವ ಸುಲತೆಯನ್ನು ನೋಡಿದನು. ಕೂಡಲೇ ಅವನು ಮರಹತ್ತಿ ಮರದ ಕೊಂಬೆಯಿಂದ ಸುಲತೆಯನ್ನು ಬಿಡಿಸಿ ಹಗ್ಗದ ಸಹಾಯದಿಂದ ಅವಳನ್ನು ಕೆಳಗಿಳಿಸಿ, ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋಗಿ, ಸ್ಮೃಹೆ ಬರುವ ಹಾಗೆ ಮಾಡಿದನು. ಹಾಗೆಯೇ ತನ್ನ ಶುಶ್ರೂಷೆಗಳಿಂದ ಅವಳಿಗೆ ಬಲಬರಿಸಿ, ಅವಳಿಂದ ನಡೆದ ಸಂಗತಿಯನ್ನು ತಿಳಿದನು. ಅವಳು ತನ ತಂದೆಯ ಮನೆಗೆ ಹೋಗುವೆನೆಂದುದರಿಂದ ಅವನು ಅವಳನ್ನು ಕರೆದುಕೊಂಡು ಸುಖಸಾಗರದ ಜಮೀನ್ದಾರನ ಮನೆಗೆ ತಂದುಬಿಟ್ಟನು.

ಸುಲತೆ ತೌರುಮನೆಯನ್ನು ಸೇರಿದಳೆಂಬ ವಾರ್ತೆ ಪ್ರತಾಪಗಡಕ್ಕೆ ತಲಪಿದರೂ ಅಲ್ಲಿ ಯಾರಿಗೂ ಸಂತೋಷವಾಗಲಿಲ್ಲ. ಕಳ್ಳರ ಕೈಗೆ ಸಿಕ್ಕಿಬಿದ್ದವಳು ಪವಿತ್ರಳಾಗಿರುವಳೆಂದು ಹೇಗೆ ನಂಬುವುದು ?

ಇನ್ನು ಮೇಲೆ ತಾನು ತನ್ನ ಗಂಡನ ಬಳಿಗೆ ತಿರುಗಿ ಹೋಗುವ ಅವಕಾಶವಿಲ್ಲವೆಂದು ತಿಳಿದು, ತನಗೆ ಆತ್ಮಹತ್ಯದ ಹೊರತು ಬೇರೆ ದಾರಿ ಯಾವುದೂ ಇಲ್ಲವೆಂದು ಸುಲತೆ ಹರಿದಾಸನೊಂದಿಗೆ ಹೇಳಿದಳು. ಅದಕ್ಕೆ ಹರಿದಾಸನು "ಅಮ್ಮಾ, ನೀನು

ನಿರ್ದೋಷಿಯೆಂದು ನನ್ನ ಅಂತರಾತ್ಮವು ಸ್ಪಷ್ಟವಾಗಿ ಹೇಳುತ್ತದೆ. ನೀನು ಅವಸರಪಟ್ಟು ಪ್ರಾಣಘಾತ ಮಾಡಿಕೊಂಡು ಬಿಡಬೇಡ. ಒಳ್ಳೆಯವರಿಗೆ ಒಳ್ಳೆಯ ಕಾಲ ಬಾರದೇ ಹೋಗುವುದಿಲ್ಲ. ನಾನು ನಿನ್ನ ಅತ್ತೆ ಮಾವ ಗಂಡಂದಿರೊಂದಿಗೆ ಮಾತಾಡಿ ಅವರನ್ನು ಒಪ್ಪಿಸುತ್ತೇನೆ. ನಿನ್ನ ಶೀಲವು ಕೆಡಲಿಲ್ಲವೆಂದು ಅವರನ್ನು ನಂಬಿಸಲು ಸಾಧ್ಯವಿದೆ. ಹೆದರಬೇಡ" ಎಂದು ಧೈರ್ಯ ಹೇಳಿದನು.

ಹಾಗೆಯೇ ಅವನು ಪ್ರತಾಪಗಡಕ್ಕೆ ಹೋಗಿ, ರಹಸ್ಯವಾಗಿ ಮೊದಲು ರವಿನಾರಾಯಣನನ್ನು ನೋಡಿ ಮಾತಾಡಿದನು. ರವಿನಾರಾಯಣನಿಗೆ ಸುಲತೆಯ ಪಾವಿತ್ರ್ಯದಲ್ಲಿ ನಂಬಿಕೆಯಿದೆಯೆಂದೂ, ಅವನಿಗೆ ಅವಳ ಮೇಲೆ ತುಂಬಾ ಪ್ರೇಮವಿದೆಯೆಂದೂ ತಿಳಿದುಕೊಂಡನು.

"ಆದರೆ ನನ್ನ ತಂದೆ ಹಳೇಕಾಲದವರು. ಹಟಗಾರರು. ಸರಿಯಾದ ನಿದರ್ಶನ ಕಂಡರೆ ಹೊರತು ಅವರ ಮನಸ್ಸು ಬದಲಾಯಿಸಲಾರದು. ಅವರ ಮನಸ್ಸಿಗೆ ನಂಬುಗೆಯಾಗುವ ಹಾಗೆ ಮಾಡುವ ಭಾರ ನಿಮ್ಮದೇ." ಎಂದ ರವಿನಾರಾಯಣ ಹರಿದಾಸನೊಂದಿಗೆ.

ಹರಿದಾಸನ ಮುಖದಲ್ಲಿ ಕಿರುನಗು ಮಿನುಗಿತು. ಅವನು ಸುಖಿಸಾಗರಕ್ಕೆ ಹೋಗಿ ಸುಲತೆಯನ್ನೂ ಅವಳ ತಂದೆಯನ್ನೂ ಪ್ರತಾಪಗಡಕ್ಕೆ ಕರೆದುಕೊಂಡು ಬಂದನು. ಆದರೆ ರುದ್ರನಾರಾಯಣನು ತನ್ನ ಸೊಸೆ ಮನೆಯ ಮೆಟ್ಟಲು ಹತ್ತಬಾರದೆಂದು ಹೇಳಿಬಿಟ್ಟನು. ಆದುದರಿಂದ ಹರಿದಾಸನೂ ಸುಲತೆಯೂ ಅತಿಥಿಗೃಹದಲ್ಲೇ ತಂಗಿರಬೇಕಾಯಿತು.

ಯೋಗಿ ಹರಿದಾಸನು ರುದ್ರನಾರಾಯಣನೊಂದಿಗೆ, "ಸುಲತೆ ಕಳಂಕ ಒಂದಿನಿತೂ ಇಲ್ಲದವಳೆಂಬುದು ನನಗೆ ಗೊತ್ತಾಗಿದೆ. ಅವಳನ್ನು ಕಳ್ಳರು ಮುಟ್ಟಲೂ ಕೂಡ ಇಲ್ಲ" ಎಂದನು.



"ನಿಮ್ಮ ಮಾತು ನನಗೆ ಸಾಲದು. ಗ್ರಾಮಸ್ಥರಾದ ಅನೇಕ ವಿಶ್ವಾಸೀ ಪ್ರಜೆಗಳಿದ್ದಾರೆಂಬುದನ್ನು ಮರೆಯುವಂತಿಲ್ಲ. ನಾನು ಸುಲತೆಯನ್ನು ಸ್ವೀಕರಿಸಿದರೆ ಜನರು ಆಕ್ಷೇಪಿಸುತ್ತಾರೆ. ಇದಕ್ಕೆ ಎಡೆ ಕೊಡಲಾರೆ" ಎಂದ ರುದ್ರನಾರಾಯಣ.

"ಹಾಗಾದರೆ ದೈವದ ನಿರ್ಣಯದ ಮೇಲೆ ಆಧಾರಪಡಬೇಕಾಯಿತು. ದೈವಿಕ ನಿರೂಪಣೆಗೆ ಯಾರಿಂದಲೂ ಅಭ್ಯಂತರವಿರಲಿಕ್ಕಿಲ್ಲ. ಅದಕ್ಕೆ ನಿಮ್ಮಿಂದೇನೂ ಅಭ್ಯಂತರವಿಲ್ಲವಷ್ಟೆ? ಅದಕ್ಕಿಂತ ಉತ್ತಮ ಪರೀಕ್ಷೆ ಬೇರಿಲ್ಲ." ಎಂದ ಹರಿದಾಸ.

"ದೈವಿಕ ನಿರೂಪಣೆಗೆ ಯಾರು ತಾನೇ ಅಭ್ಯಂತರ ಹೇಳಬಲ್ಲರು? ಹಾಗಾದರೆ ಪ್ರಶ್ನೆಯೇ ಇಲ್ಲವಲ್ಲ!" ಎಂದ ರುದ್ರನಾರಾಯಣ.

ಆಮೇಲೆ ರುದ್ರನಾರಾಯಣನ ಮನೆಯ ಚಾವಡಿಯಲ್ಲಿ ಅವನ ಬಂಧುಮಿತ್ರರೆಲ್ಲಾ ಸಮಾವೇಶರಾದರು. ಸುಲತೆ ಅವಳ ತಂದೆಯೊಂದಿಗೆ ಅಲ್ಲಿಗೆ

ಬಂದಳು. ಹರಿದಾಸನು ಒಂದು ಗಾಜಿನ ಲೋಟೆಯನ್ನೂ, ಮಯಣದ ಉಂಡೆಯನ್ನೂ, ಒಂದು ಚಿಮುಟವನ್ನೂ ತಂದು ರುದ್ರನಾರಾಯಣನಿಗೆ ಅವುಗಳನ್ನು ತೋರಿಸಿದನು. ಅನಂತರ ಒಂದು ಸಣ್ಣ ಪೀಠವನ್ನು ತಂದು ರುದ್ರನಾರಾಯಣನ ಮುಂದೆ ಇಟ್ಟನು. ಆ ಲೋಟೆಯಲ್ಲಿ ಗಂಗಾಜಲವನ್ನು ಮಂತ್ರ ಹೇಳುತ್ತಾ ಸುರಿದು ರುದ್ರನಾರಾಯಣನ ಮುಂದಿಟ್ಟು, ಚಿಮುಟವನ್ನು ಅವನ ಕೈಗೆ ಕೊಟ್ಟು, ಚಿಮುಟದಿಂದ ಮಯಣದುಂಡೆಯನ್ನು ತೆಗೆದು ಲೋಟೆಯ ನೀರಿನ ಅಡಿಯಲ್ಲಿ ಇಡಲು ಹೇಳಿದನು. ಹಾಗೆಯೇ ರುದ್ರನಾರಾಯಣನು ಇಡುವಾಗ, ಚಿಮುಟವನ್ನು ಬಿಟ್ಟ ಕೂಡಲೇ ಮಯಣದುಂಡೆ ನೀರ ಮೇಲೆ ತೇಲಿತು. ಅದರಂತೆ ಎಷ್ಟುಮಂದಿ ಆ ಉಂಡೆಯನ್ನು ಮುಳುಗಿಸಲು ಪ್ರಯತ್ನಿಸಿದರೂ ಅದು ಮುಳುಗದೆ ತೇಲುತಿತ್ತು.

ತರುವಾಯ ಹರಿದಾಸನು ಸುಲತೆಯನ್ನು ಕರೆದು "ಅಮ್ಮಾ, ನಿನ್ನ ಪಾವಿತ್ರ್ಯತೆಯಿಂದ ನೀನು ಈ ಉಂಡೆಯನ್ನು ನೀರಲ್ಲಿ ಮುಳುಗಿರುವಂತೆ ಮಾಡಲು ಸಾಧ್ಯವೋ ನೋಡು. ಸೀತಾದೇವಿಯಂತಹಳು ಕೂಡಾ ತನ್ನ ಪಾತಿವ್ರತ್ಯವನ್ನು ರುಜು ಮಾಡಿದ್ದಾಳೆ. ಅವಳನ್ನು ಧ್ಯಾನಿಸಿಕೊಂಡು ನಿನ್ನ ಸತ್ಯವನ್ನು ಪ್ರದರ್ಶಿಸಮ್ಮಾ" ಎನುತ್ತ ಪೀಠವನ್ನು ಅವಳ ಸಮೀಪಕ್ಕೆ ಜರುಗಿಸಿದನು. ಗಾಜಿನ ಲೋಟೆಯನು ಪೀಠದ ಕೊನೆಯಲ್ಲಿಟ್ಟನು.

ಸುಲತೆ ಕಣ್ಣು ಮುಚ್ಚಿ ತುಸುಧ್ಯಾನ ಮಾಡಿದ ಮೇಲೆ ಮಯಣದುಂಡೆಯನು ಚಿಮುಟದ ಸಹಾಯದಿಂದೆತ್ತಿ ನೀರಿನೊಳಗಿಟ್ಟು ಚಿಮುಟವನ್ನು ಎತ್ತಿದಳು. ಉಂಡೆ ನೀರಿನ ಅಡಿಯಲ್ಲೇ ಉಳಿದುಹೋಯಿತು. ಮೇಲೆ ಏಳಲೇ ಇಲ್ಲ.

ಎಲ್ಲರೂ ಹರ್ಷಧ್ವನಿ ಮಾಡಿದರು. ಸುಲತೆ ಪವಿತ್ರಳೆಂದು ಘಂಟಾಘೋಷವಾಗಿ ಹೋಯಿತು. ಅವಳ ಮಾವಯ್ಯ ಅವಳನ್ನು ಗೌರವದಿಂದ ಸ್ವೀಕರಿಸಿಕೊಂಡರು. ಆಮೇಲೆ ಹರಿದಾಸನು ಸಾಗರದಿಘೀ ಪ್ರಾಂತದಲ್ಲಿ ಕಳ್ಳರ ಕಾಟ ಅಡಗಿಸುವಂತೆ ತಕ್ಕ ಏರ್ಪಾಡನ್ನು ಮಾಡಲು ಎರಡು ಕಡೆಯವರಿಗೂ ಹೇಳಿ ತನ್ನ ಆಶ್ರಮಕ್ಕೆ ಹೊರಟುಹೋದನು.

ಯೋಗಿ ಹರಿದಾಸನು ಮಾಡಿದ ಇಂದ್ರಜಾಲದ ರಹಸ್ಯವೇನಂದರೆ, ಮಯಣದ ಉಂಡೆ ಕೇವಲ ಮಯಣ ಉಂಡೆಯಾಗಿರಲಿಲ್ಲ. ಟೊಳ್ಳಾಗಿರುವ ಚಿಕ್ಕ ಕಬ್ಬಿಣದ ಗೋಲಿನ ಮೇಲೆ ಮಯಣವನ್ನು ಅಂಟಿಸಲಾಗಿತ್ತು. ಮಯಣದ ಕಾರಣದಿಂದ ಅದು ನೀರ ಮೇಲೆ ತೇಲಿತು. ಆದರೆ ಪೀಠದ ಕೊನೆಯ ಕೆಳಗೆ ಬಲವಾದ ಅಯಸ್ಕಾಂತವಿದ್ದು, ಅದು ಕಬ್ಬಿಣವನ್ನು ಆಕರ್ಷಿಸುತ್ತ ಉಂಡೆ ತೇಲದಂತೆ ಮಾಡಿತ್ತು.





# ಮರಳಿಬಂದಹಾರ

ಒಂದು ಊರಿನಲ್ಲಿ ರಾಮಣ್ಣ ರಂಗಣ್ಣ ಎಂಬ ಅಣ್ಣತಮ್ಮಂದಿರಿದ್ದರು. ಅವರಿಬ್ಬರೂ ತಂದೆಯ ಆಸ್ತಿಯನ್ನು ಹಂಚಿಕೊಂಡು ಬೇರೆಬೇರೆ ಮನೆಗಳಲ್ಲಿ ವಾಸವಾಗಿದ್ದರು. ರಾಮಣ್ಣನ ಹೆಂಡತಿ ಜಾನಕಿ ತುಂಬಾ ಒಳ್ಳೆಯವಳು. ಮಿತವ್ಯಯದಿಂದ ಕುಟುಂಬವನ್ನು ಚೊಕ್ಕವಾಗಿ ನೋಡುತ್ತ ಅಭಿವೃದ್ಧಿಗೆ ತಂದು ಕೊಳ್ಳುತ್ತಿದ್ದಳು.

ಆದರೆ ರಂಗಣ್ಣನ ಹೆಂಡತಿ ಮೀನಾಕ್ಷಿ ಜಾನಕಿಗೆ ತೀರವಿರುದ್ಧಳಾಗಿದ್ದಳು. ಜಾನಕಿಯ ಕುಟುಂಬವು ಚೊಕ್ಕಟವಾಗಿ ಬೆಳಗುವುದನ್ನು ನೋಡುತ್ತ ಒಳಗೊಳಗೇ ಅಸಹನೆಯಿಂದ ಕುದಿಯುತ್ತಿದ್ದಳು.

ಜಾನಕಿ ತನ್ನ ಮಿತವ್ಯವಹಾರಗಳಿಂದ ಹಣವುಳಿಸಿ ಒಂದು ಚಂದ್ರಹಾರವನ್ನು ಮಾಡಿಸಿಕೊಂಡಳು. ಅದನ್ನು ನೋಡಿದಂದಿನಿಂದಲೂ ಮೀನಾಕ್ಷಿಗೆ ನಿದ್ದೆ ಬರುತ್ತಿರಲಿಲ್ಲ. ಕಡೆಗೆ ಒಂದು ದಿನ ಅವಳು ಜಾನಕಿಯೊಂದಿಗೆ, "ಅಕ್ಕ, ನಿನ್ನ ಚಂದ್ರಹಾರ ಒಂದುಸಾರಿ ಕೈ ಬದಲಿಗೆ ಕೊಡುವೆಯಾ? ಅಂತಹುದನ್ನೇ ಮಾಡಿಸಬೇಕು ಅಂತ ಇದ್ದೇನೆ. ಅದರ ನಮೂನೆ ಚೆನ್ನಾಗಿದೆ" ಎಂದಳು.

"ಅದಕ್ಕೇನು?" ಎಂದು ಜಾನಕಿ ತನ್ನ ಚಂದ್ರಹಾರವನ್ನು ತಂದು ಮೀನಾಕ್ಷಿಗೆ ಕೊಟ್ಟಳು.

ಅನಂತರ ಎಷ್ಟು ದಿನಗಳು ಕಳೆದರೂ ಮೀನಾಕ್ಷಿ ಜಾನಕಿಗೆ ಅವಳ ಹಾರವನ್ನು ಹಿಂದಿರುಗಿ ಕೊಡಲೇ ಇಲ್ಲ. ಜಾನಕಿ ಕೆಲವು ದಿನ ಸಹನೆಯಿಂದಿದ್ದು, ಒಂದು ದಿನ ಮೀನಾಕ್ಷಿಯ ಹತ್ತಿರ ತನ್ನ ಚಂದ್ರಹಾರವನ್ನು ಕುರಿತು ಕೇಳಿದಳು. ಮೀನಾಕ್ಷಿ ಕಣ್ಣಗಲಿಸಿ "ಎಂಥ ಹಾರ? ನಿನ್ನ ಹಾರ ನನ್ನ ಹತ್ತಿರವಿದೆಯೆ? ನನ್ನ ಹತ್ತಿರ ಬೇಕಾದಷ್ಟು ನಗಗಳಿರುವಾಗ ನಿನ್ನದು ನನಗೇಕೆ? ಯಾರಾದರೂ ನಂಬುವರೇ? ನಾಲ್ಕು ಮಂದೀ ಮುಂದೆ ನಮ್ಮ ಮಾನಾ ತೆಗೀಬೇಕೊಂತ ಇರುವೆಯೇನು? ಒಳ್ಳೇ ಕತೆ!" ಎಂದು ಬಹಳ ಕೆಟ್ಟದಾಗಿ ಮಾತಾಡಿದಳು.

ಜಾನಕಿಗೆ ಕಣ್ಣೀರು ತುಂಬಿಕೊಂಡಿತು. ಚಂದ್ರಹಾರ ವಶಪಡಿಸಿಕೊಂಡದ್ದು ಸಾಲದೆ, ತನ್ನನ್ನು ಅವಮಾನಪಡಿಸಿದ್ದು ನೋಡಿ ತುಂಬಾ ಸಂಕಟಪಟ್ಟಳು. ಮತ್ತೇನೂ ಮಾತಾಡದೆ ತನ್ನ ಮನೆಗೆ ಹೋಗಿಬಿಟ್ಟಳು ಜಾನಕಿ. ಆ ಮೇಲೆ ಸಮಯ ನೋಡಿ ಅವಳು ಈ ವಿಷಯವನ್ನು ತನ ಗಂಡನೊಂದಿಗೆ

ಬಿ. ಬಾಬೂರಾವ್

ಹೇಳಲು, ಅವನು ಅದನ್ನು ತುಂಬ ಹಗುರು ಮಾಡಿ ಗಾಳಿಗೆ ಹಾರಿಸುವಂತೆ, "ಹೋಗಲಿಬಿಡೂ, ಪರ ಕೀಯರೇನಲ್ಲವಷ್ಟೆ?" ಎಂದುಬಿಟ್ಟನು.

ಹೀಗಿರುವಾಗ ಒಂದು ದಿನ ಜಾನಕಿಯ ಮಗಳು ತೌರುಮನೆಗೆ ಬಂದು ತನ್ನ ತಾಯಿಗೆ ನಡೆದ ಅನ್ಯಾಯವನ್ನು ಕುರಿತು ಕೇಳಿ ತಿಳಿದಳು. ತನ್ನ ತಾಯಿಗೆ ಆದ ಅವಮಾನಕ್ಕೆ ತಕ್ಕ ಪ್ರತಿಕ್ರಿಯೆ ಮಾಡ ಬೇಕೆಂದು ಅವಳಿಗೆ ತೋರಿತು. ಮೀನಾಕ್ಷಿ ಚಿಕ್ಕಮ್ಮ ತನ್ನನ್ನು ನೋಡಲು ಹೇಗೂ ಬಂದೇ ಬರುತ್ತಾಳೆ. ಆಗ ಏನು ಮಾಡಬೇಕೆಂಬುದನ್ನು ಅವಳು ತಾಯಿ ಯೊಂದಿಗೆ ಹೇಳಿಟ್ಟಳು.

ಅಂದುಕೊಂಡ ಹಾಗೆಯೇ ತನ್ನ ಬಾವಯ್ಯನ ಮಗಳನ್ನು ನೋಡಲು ಮೀನಾಕ್ಷಿ ಬಂದೇ ಬಂದಳು. ಅವಳು ತಮ್ಮ ಅಂಗಳದಲ್ಲಿ ಕಾಲಿಡುವುದನ್ನು ನೋಡಿದ ಜಾನಕಿಯ ಮಗಳು, ನೋಡದವಳಂತೆ ತಾಯಿಯೊಂದಿಗೆ "ಅಮ್ಮಾ, ನೀನು ಏನೋ ಚಂದ್ರಹಾರ ಮಾಡಿಸಿಕೊಂಡೆಯೆಂದು ಹೇಳಿದ್ದೆ ಯಲ್ಲಾ? ನನಗೆ ತೋರಿಸಲೇ ಇಲ್ಲ" ಎಂದಳು.

ಮೀನಾಕ್ಷಿ ಹೊರಗೇ ನಿಂತು ಒಳಗಿನ ಮಾತು ಗಳನ್ನು ಕೇಳತೊಡಗಿದಳು. ಜಾನಕಿ ಮಗಳಿಗೆ "ಅದು ಮಾಡಿಸಿಕೊಂಡ ನಗ ಅಲ್ಲಮ್ಮ, ಯಾವನೋ ನಿನ್ನ ಅಪ್ಪನ ಹತ್ತಿರ ಅದನ್ನು ಮಾರಲಿಕ್ಕೆ ತಂದ ನಂತೆ. ಅಗ್ಗದಲ್ಲಿ ಸಿಗುತ್ತೆ ಅಂತ ತೆಗೆದುಕೊಂಡು ಬಿಟ್ಟರು. ಆಮೇಲೆ ಗೊತ್ತಾಯಿತು ಅದು ಕಳ್ಳ ಮಾಲೂ ಅಂತ! ಅದೃಷ್ಟವಶಾತ್ ಅದು ಕೈಬಿಟ್ಟು ಹೋಯ್ತು ಬಿಡು!" ಎಂದಳು.

"ಅದು ಹೇಗಮ್ಮ?" ಎಂದು ಮಗಳು ಆಶ್ಚರ್ಯದಿಂದ ಕೇಳಿದಳು. ಜಾನಕಿ ಹೇಳಿದಳು: "ಅದನ್ನು ನಿನ್ನ ಚಿಕ್ಕಮ್ಮನಿಗೆ ಕೈ ಬದಲಿಗೆ ಕೊಟ್ಟೆ. ಆಮೇಲೆ ಅದು ಕಳ್ಳಮಾಲು ಅಂತ ಗೊತ್ತಾಯ್ತು. ಅದಕ್ಕೇ ನಗ ತಾನು ತಕ್ಕೊಂಡಿಲ್ಲ ಅಂತ ಮೀನಾಕ್ಷಿ ಸುಳ್ಳು ಹೇಳಿದರೂ ಮಾತಾಡದೆ ಸುಮ್ಮನಿದ್ದೆ. ನಾಳೆಯೋ ನಾಡಿದ್ದೋ ರಕ್ಷಕಭಟರು ಶೋಧನೆಗೆ ಬಾರದೆ ಹೋಗರು. ಕಳ್ಳ ಸಿಕ್ಕಿಬಿದ್ದಿದ್ದಾನಂತೆ. ನಮ್ಮ ಹತ್ತಿರ ನಗ ಇಲ್ಲದ್ದರಿಂದ ನಮಗೇನೂ ಭಯವಿಲ್ಲ. ಅದು ಯಾರ ಹತ್ತಿರ ಸಿಗುತ್ತೋ ಅವರನ್ನೇ ಹಿಡೀ ತಾರೆ. ನಿಜ ಹೊರಡಿಸಲು ಚಿತ್ರಹಿಂಸೆ ಮಾಡ್ತಾ ರಂತೆ ಪಾಪ!"

ಈ ಮಾತುಗಳನ್ನು ಕೇಳಿದ ಮೀನಾಕ್ಷಿಯ ಕಾಲು ಗಳು ನಡುಗಿದುವು. ಅವಳು ಅಲ್ಲಿಂದಲೇ ತನ್ನ ಮನೆಗೆ ಹೊರಟುಹೋದಳು. ಮರುದಿನ ಬೆಳಗ್ಗೆ ಜಾನಕಿಯ ಮನೆಯ ಜಗಲೀ ಮೂಲೆಯಲ್ಲಿ ಆ ಚಂದ್ರಹಾರ ಬಿದ್ದಿತ್ತು. ತನ್ನ ಉಪಾಯ ನಾಟ ಫಲ ಕೊಟ್ಟು ಬಿದ್ದುದಕ್ಕೆ ತಾಯಿ ಮಗಳು ಸಂತೋಷಿಸಿದರು.





# ದನಗಾಹಿ ಬೋರ

ಹಳ್ಳಿಯಲ್ಲಿ ಹುಟ್ಟಿದವನಾದ ಬೋರನೆಂಬವನು ಬದುಕುವ ದಾರಿಯನ್ನು ಹುಡುಕುತ್ತಾ ರಾಮ ನಗರಕ್ಕೆ ಹೋದನು. ಅಲ್ಲಿ ತುಂಬ ಅಲೆದಾಡಿದ ಮೇಲೆ ರಂಗೇಗೌಡನ ಮನೆಯಲ್ಲಿ ದನಗಳನ್ನು ಮೇಯಿಸುವ ಕೆಲಸ ಅವನಿಗೆ ಸಿಕ್ಕಿತು. ಉಳಿದ ವೇಳೆಯಲ್ಲಿ ಚಿಲ್ಲರೆ ಚಾಕರಿಯನ್ನೂ ಮಾಡಬೇಕಿತ್ತು.

ಒಂದು ದಿನ ಸಂಜೆ ಬೋರನು ಎತ್ತುಗಳನ್ನು ಗಾಡಿಗೆ ಕಟ್ಟಿಕೊಂಡಿದ್ದಾಗ ರಂಗೇಗೌಡನ ಹೆಂಡತಿ ಗೌರಮ್ಮ ಅವನನ್ನು ನೋಡಿ, "ಏನೋ ಬೋರಾ, ಎಲ್ಲಾ ದನಗಳೂ ಬಂದಿವೆಯೆಂದೆಯಲ್ಲಾ ? ಎಮ್ಮೆ ಬರಲೇ ಇಲ್ಲ. ಕರುಕೂಗುತ್ತಾ ಇದೆ. ಎಮ್ಮೆಯನ್ನು ಎಲ್ಲಿ ಬಿಟ್ಟುಬಂದೆಯೋ ನೋಡಿ ತೆಗೆದುಕೊಂಡು ಬಾ. ಬರಿಗೈಲಿ ಬಂದರೆ ನಿನ್ನ ಚರ್ಮ ಸುಲಿಸಿ ಬಿಟ್ಟೇನು !" ಎಂದಳು.

ಆಗಲೇ ಕತ್ತಲಾಗುವ ಹೊತ್ತು. ಬೆಳಿಗ್ಗೆ ಯಾವಾಗಲೋ ಒಂದು ಮುಷ್ಟಿ ಅನ್ನ ತಿಂದಿದ್ದ ಬೋರನಿಗೆ ತುಂಬಾ ಹಸಿವೆಯಾಗುತ್ತಿದ್ದಿತು. ಹಾಗೆಂದು ಈಗ ಗೌರಮ್ಮನೊಡನೆ ಹೇಳಿದರೆ ಪ್ರಯೋಜನವಿಲ್ಲವೆಂದು ಅವನಿಗೆ ಗೊತ್ತು.

ಅಂತಲೇ ಅವನು ಕಂಬಳಿ ಹೊದ್ದು, ಕೋಲು ತೆಗೆದುಕೊಂಡು ಎಮ್ಮೆಯನ್ನು ಹುಡುಕಲು ಹೋದನು. ಅವನು ಮೇಯಿಸಿದ ಸ್ಥಳಗಳಲ್ಲೆಲ್ಲಾ ಹುಡುಕಿ ನೋಡಿದನು. ಎಮ್ಮೆ ಕಾಣಿಸಲಿಲ್ಲ. ಆದರೆ ಅವನ ಕಾಲುಗಳು ದಣಿದು ನೋಯುತ್ತಿದ್ದುವು. ಒಂದಡಿ ಎತ್ತಲಿಕ್ಕೂ ಕಷ್ಟವಾಯಿತು. ಮನೆಗೆ ಹೋದರೆ ಗೌರಮ್ಮ ಪ್ರಾಣವನ್ನೇ ತೋಡಿ ಬಿಡುತ್ತಾಳೆ. ತನ್ನ ಪ್ರಯಾಣಕ್ಕೆ ಗಾಡಿ ಕಟ್ಟಲಿಲ್ಲವೆಂದು ಗೌಡರು ಬೇರೆ ಹಾರಿ ಬೀಳುತ್ತಾರೆ. ಅಂತಲೇ ಬೋರ ಒಂದು ಪಾಳು ಗುಡಿಯ ಮೂಲೆಯಲ್ಲಿ ಕುಸಿಕುಳಿತು ಹಾಗೆಯೇ ಒರಗೆ ನಿದ್ದೆಗೀಳದನು.

ಅರ್ಧರಾತ್ರಿ ದಾಟಿದ ಮೇಲೆ ಇಬ್ಬರು ಕಳ್ಳರು ಅಲ್ಲಿಗೆ ಬಂದು, "ಈ ನಗಗಳನ್ನು ನಮ್ಮೊಂದಿಗೆ ಇಟ್ಟುಕೊಳ್ಳುವುದು ಒಳ್ಳೆಯದಲ್ಲ. ಕಳ್ಳತನದ ಗದ್ದಲದ ಸದ್ದಡಗಿದ ಮೇಲೆ ತೆಗೆದುಕೊಂಡು ಹೋಗೋಣ. ಅದುವರೆಗೆ ಇವುಗಳನ್ನು ಇಲ್ಲಿಯೇ ಅಡಗಿಸಿಡುವ." ಎಂದು ಹೇಳಿಕೊಂಡು ಆ ಕತ್ತಲೆಯಲ್ಲೇ ಒಂದು ಮೂಲೆಯಲ್ಲಿ ಹೊಂಡ ತೆಗೆದು ಅದರೊಳಗೆ ಗಂಟನ್ನಿಟ್ಟು ಮೇಲೆ ಮಣ್ಣು ಮುಚ್ಚಿ

ವಿ. ವಾಯ್. ರಾಮಯ್ಯ



ಹೊರಟುಹೋದರು. ಅಲ್ಲಿ ಮೂಲೆಯಲ್ಲಿದ್ದ ಚೋರನನ್ನು ಅವರು ನೋಡಲೇ ಇಲ್ಲ.

ಇದನ್ನು ಗಮನಿಸಿದ ಚೋರ, ಈ ನಗಗಳ ಗಂಟನ್ನು ಒಯ್ದು ಗೌರಮ್ಮನಿಗೆ ಕೊಟ್ಟುಬಿಟ್ಟರೆ, ಎಮ್ಮೆ ದೊರಕದ ಬೈಗುಳು ತಪ್ಪುತ್ತವೆ ಎಂದುಕೊಂಡು ಆ ನಗಗಳ ಗಂಟು ತೆಗೆದುಕೊಂಡು ಗೌಡರ ಮನೆಗೆ ಹೋದನು.

ಎಮ್ಮೆ ಇಲ್ಲದೆ ಅರ್ಧರಾತ್ರಿ ದಾಟಿದ ಮೇಲೆ ಮನೆಗೆ ಬಂದ ಚೋರನನ್ನು ನೋಡಿ ಗೌರಮ್ಮ ಮೊದಲು ಉರಿದುಬಿದ್ದರೂ, ಅವನು ತಂದುಕೊಟ್ಟ ನಗಗಳ ಮೂಟೆಯನ್ನು ನೋಡಿ ಹರ್ಷದಿಂದ ಮುಖ ಅರಳಿಸಿಕೊಂಡಳು. ಆ ನಗಗಳಿಂದ ಅಂಥಾದ್ದು ಹತ್ತು ಎಮ್ಮೆಗಳನ್ನು ಕೊಂಡುಕೊಳ್ಳಬಹುದು !

"ಹಸಿವೆ ಪ್ರಾಣಾ ತೆಗೀತಾ ಇದೆ. ಒಂದು ಮುಷ್ಟಿ ಉಪ್ಪನ್ನವಾದರೂ ನೀಡಿ ಅಮ್ಮನವರೇ !" ಎಂದ ಚೋರ.

"ಈಗೆಲ್ಲಿಯ ಅನ್ನ ? ನಿನ್ನ ಬಾರಿ ನೋಡಿ ನೋಡಿ. ಇದ್ದ ಅನ್ನಾನೆಲ್ಲ ನಾಯಿ ಹಾಕಿದೆ. ಸುಮ್ಮನೆ ಮಲಕ್ಕೋ, ಬೆಳಗಾಗಲಿ. ಆಮೇಲೆ ಏನಾದರೂ ನೋಡಿ ಕೊಡುತ್ತೇನೆ" ಎಂದು ಹೇಳಿ ಗೌರಮ್ಮ ಬಾಗಿಲು ಹಾಕಿಕೊಂಡಳು.

ಚೋರ ಕಾಲೆಳೆಯುತ್ತಾ ಹೋಗಿ ದನದ ಕೊಟ್ಟಿಗೆಯ ತನ್ನ ಜಾಗದಲ್ಲಿ ಬಿದ್ದುಕೊಂಡ.

ಗೌರಮ್ಮ ನಿದ್ದೆಮಾಡುತ್ತಿದ್ದ ಗಂಡನನ್ನು ಎಬ್ಬಿಸಿ, ನಗಗಳ ಮೂಟೆಯನ್ನು ತೋರಿಸಿದಳು. ಮೂಟೆ ಬಿಚ್ಚಿ ಅದರೊಳಗಿನ ಆಭರಣಗಳನ್ನು ನೋಡಿದ ಕೂಡಲೇ ರಂಗೇಗೌಡನಿಗೆ ಏನೋ ಭಯವಾಗಿ ಎದೆ ಜುಮ್ಮೆಂದಿತು.

"ಇವು ಸಾಧಾರಣ ನಗಗಳಲ್ಲ. ರಾಣಿಯೂ ಮಹಾರಾಜರೂ ಧರಿಸುವಂತಹುದು. ಇವು ನಮ್ಮಲ್ಲಿರುವುದು ಯಾರಿಗಾದರೂ ಗೊತ್ತಾದರೆ ನಮ್ಮ ಪ್ರಾಣಕ್ಕೆ ಬರುತ್ತೆ ಕಣೇ ! ಈಗೇನು ದಾರಿ? " ಎಂದ ರಂಗೇಗೌಡ.

"ನಾವು ಗೊತ್ತಾಗಲಿಕ್ಕೆ ಬಿಟ್ಟರೆ ತಾನೇ ?" ಎಂದಳು ಗೌರಮ್ಮ. "ನಾವು ಗೊತ್ತುಪಡಿಸುವುದೇನು ಬಂತು ? ಇದನ್ನು ತಂದುಕೊಟ್ಟ ಚೋರನೇ ಬಾಯಿ ತಪ್ಪಿ ಯಾರ ಹತ್ತಿರವಾದರೂ ಹೇಳಿದರೆ ತೀರೇಹೋಯಿತು" ಎಂದ ರಂಗೇಗೌಡ.

ಬೆಳಗಾಗುವುದರೊಳಗೆ ಸರಿಮಾಡಿಬಿಡಬೇಕು, ಎಂದುಕೊಂಡ ಗೌರಮ್ಮ, ಒಂದು ಉಪಾಯ ಮಾಡಿ, ಚೋರನನ್ನು ಒಳಗೆ ಕರೆದುಕೊಂಡುಬಂದು, "ನಮ್ಮನ್ನು ಹೀಗೂ ಮೋಸ ಪಡಿಸುವೆಯಾ ? ಮೂಟೆಯೊಳಗೆ ನಗಗಳಿವೆಯೆಂದು ಯಾಕೆ ಸುಳ್ಳು ಹೇಳಿದಿ ? ಎಮ್ಮೆ ಕಳೆದುಹೋದುದಕ್ಕಾಗಿ ನಮ್ಮ ಹತ್ತಿರ ಹೀಗೆ ಆಟ ತೋರಿಸುವೆಯಾ ? " ಎಂದು ಕಣ್ಣು ತಿರುಗಿಸುತ್ತ ಕೇಳಿದಳು. ಸರಳ ಗುಣದ ಚೋರ "ನಾನು ಗಂಟನ್ನು ಬಿಡಿಸಿ ನೋಡಿಲ್ಲ

ಅಮ್ಮನವರೆ. ಕಳ್ಳರು ಅಂದುಕೊಂಡ ಮಾತು ಮಾತ್ರ ಕೇಳಿಗೆ " ಎಂದ ದಿಗಿಲಿನಿಂದ.

" ಇಕ್ಕಿ ಚೆನ್ನಾಯ್ತು. ನಾನು ಕೂಡಲೇ ನೋಡಿದ್ದರಿಂದ ಸರಿಹೋಯ್ತು. ಪೂರ್ತಿ ಬೆಳಗಾಗುವುದಕ್ಕೆ ಮೊದಲೇ ಈ ಹರಳುಗಲ್ಲಿನ ಮೂಟೆಯನ್ನು ಎಲ್ಲಿಂದ ತಂದೆಯೋ ಅಲ್ಲೇ ಇಟ್ಟು ಬಾ. ಇದೇನು ಮಂತ್ರವೋ ಮಾಯೆಯೋ ? ನಮಗೇಕೆ ?" ಎಂದು ಗೌರಮ್ಮ ಹರಳುಕಲ್ಲಿನ ಮೂಟೆಯನು ಬೋರನಿಗೆ ಕೊಟ್ಟಳು.

ಬೋರ ಆ ಮೂಟೆಯನ್ನು ತೆಗೆದುಕೊಂಡು ಓಡುತ್ತಾ ಹೋಗಿ ಪಾಳು ಗುಡಿಯ ಮೂಲೆಯಲ್ಲಿ ಹುಗಿದಿಟ್ಟು ಹಿಂದಿರುಗುವಾಗ, ಕಳ್ಳರು ಅವನನ್ನು ನೋಡಿಬಿಟ್ಟರು.

ಅವರಿಗೇನೋ ಅನುಮಾನವಾಗಿ ಬೋರನ ಹಿಂದೆಯೇ ಬಂದು, ಅವನು ರಂಗೇಗೌಡನ ಮನೆಗೆ ಹೊಕ್ಕುದನ್ನೂ ನೋಡಿದರು. ಏನೋ ಅನುಮಾನದಲ್ಲಿ ಅಲ್ಲಿಂದ ಹಿಂದಿರುಗಿದ ಕಳ್ಳರು ಪಾಳುಗುಡಿಯಲ್ಲಿ ಹುಗಿದಿಟ್ಟ ಮೂಟೆಯನ್ನು ತೆಗೆದು ಬಿಚ್ಚಿ ಅದರೊಳಗೆ ಕಲ್ಲು ಹರಳುಗಳಿರುವುದನ್ನು ನೋಡಿ ದಂಗಾಗಿ ಮೂಗಿನ ಮೇಲೆ ಬೆರಳಿಟ್ಟರು.

ಇಷ್ಟರಲ್ಲಿ ರಾಜನು ಹಾಕಿಸಿದ ಡಂಗುರವು ಊರೊಳಗೆಲ್ಲಾ ಮೊಳಗಿತು. ಅರಮನೆಯೊಳಗಿನ ನಗಗಳನ್ನು ಕಳ್ಳರು ಎತ್ತಿಕೊಂಡು ಹೋಗಿದ್ದಾರೆಂದೂ, ನಗಗಳೊಂದಿಗೆ ಕಳ್ಳರನ್ನೂ ಹಿಡಿದುಕೊಟ್ಟವರಿಗೆ ಸಾವಿರ ರೂಪಾಯಿ ಬಹುಮಾನ ಕೊಡುವರೆಂದೂ ಡಂಗುರ ಸಾರಿದುದನ್ನು ಕೇಳಿ, ರಂಗೇಗೌಡನಿಗೆ ಭಯವಾಯಿತು.

" ಯಾಕೆ ಹೆದರುತ್ತೀರಿ ? ಮೂಟೆಯಲ್ಲಿದ್ದುದು ಕಲ್ಲುಗಳು ತಾನೇ ? " ಎಂದು ಗೌರಮ್ಮ ತಾನು ಮಾಡಿದ ಉಪಾಯವನ್ನು ನೆನಪು ಮಾಡಿ ಗಂಡನಿಗೆ ಧೈರ್ಯಕೊಟ್ಟಳು.

ನಾಲ್ಕು ದಿವಸಗಳವರೆಗೆ ಯಾರ ಬಾಯಿಯಲ್ಲಿ ನೋಡಿದರೂ ಅರಮನೆಯ ನಗಗಳನ್ನು ಕದ್ದ ಕಳ್ಳರದೇ ಮಾತುಗಳು. ತರುವಾಯ ಕ್ರಮವಾಗಿ ಆ ವಿಷಯ



ಜನರ ಬಾಯಿಗಳಿಂದ ಮರೆಯಾಯಿತು. ಆದುದರಿಂದ ಗೌರಮ್ಮನಿಗೆ ಸ್ವಲ್ಪ ಧೈರ್ಯ ಬಂತು. ಅದರಲ್ಲಿಯ ರಾಣಿಯ ನಗಗಳನ್ನು ತಾನು ಧರಿಸಿ ನೋಡಬೇಕೆಂದು ಅವಳಿಗಿದ್ದ ಆಸೆಯನ್ನು ತಡೆದುಕೊಳ್ಳಲಾರದೆ. ಆದಿನ ರಾತ್ರಿ ಎಲ್ಲರೂ ನಿದ್ದೆ ಮಾಡಿದ ಮೇಲೆ ಅವಳು ನಗಗಳನ್ನು ಧರಿಸಿಕೊಂಡು ಕನ್ನಡಿಯಲ್ಲಿ ತನ್ನ ಚೆಂದವನ್ನು ನೋಡಿ ಆನಂದದಿಂದ ಮೈಮರೆತು ನಿಂತಳು.

ಮನೆಯಲ್ಲಿ ಅಷ್ಟು ಹೊತ್ತಿನಲ್ಲಿ ಜಗಜಗ ದೀಪ ಉರಿಯುವುದನ್ನು ನೋಡಿ ಚೋರನಿಗೆ ಅನುಮಾನವಾಗಿ ಕೊಟ್ಟಿಗೆಯಿಂದ ಎದ್ದು ಬಂದು ಬಾಗಿಲು ಸಂದಿನಿಂದ ನೋಡಿದನು. ಗೌರಮ್ಮನನ್ನೂ ಅವಳು ಧರಿಸಿದ ನಗಗಳನ್ನೂ ನೋಡಿ ಆಶ್ಚರ್ಯ ಪಡುತ್ತ ಅವಳು ತನ್ನನ್ನು ಮೋಸಪಡಿಸಿರಬೇಕು ಎಂದುಕೊಂಡು, ಮತ್ತೆ ದನದ ಕೊಟ್ಟಿಗೆಯೊಳಗೆ ಮಲಗಿದನು. ನಿದ್ರೆಮಾತ್ರ ಬರಲಿಲ್ಲ.

ಆ ಸಮಯದಲ್ಲಿ ಕಳ್ಳರು ರಂಗೇಗೌಡನ ಮನೆಯ ಬಾಗಿಲು ಬಡೆಯುತ್ತ "ಬಾವಾ ಬಾವಾ !" ಎಂದು ಕೂಗಿದರು. "ಯಾರು ?" ಎಂದು ಗೌರಮ್ಮ ಕೇಳಿದಳು.

"ನಾನೇ, ನಿಮ್ಮ ಲಿಂಗಯ್ಯಕಾಣ್ರೇ !" ಎಂದ ಕಳ್ಳನೊಬ್ಬ. "ಇಷ್ಟು ರಾತ್ರಿಯಲ್ಲಿ ಏಕೆ ಬಂದೆಯೋ ಅಣ್ಣಾ ? ಏನು ಅಂಥ ಕೆಲಸವೋ ?" ಎನ್ನುತ್ತ ಗೌರಮ್ಮ ಬಾಗಿಲು ತೆರೆದದ್ದೇ ತಡ, ಇಬ್ಬರು ಕಳ್ಳರೂ ಒಮ್ಮೆಗೇ ಒಳನುಗ್ಗಿ ಬಾಗಿಲು ಹಾಕಿ ತಾಳ ಜಡಿದು. ಗೌರಮ್ಮನನ್ನು ಕಟ್ಟಿದರು.

ಗೌರಮ್ಮನ ಕೂಗು ಕೇಳಿ ರಂಗೇಗೌಡನೂ ಎದ್ದು ಬಂದ. ಅವನನ್ನೂ ಕಳ್ಳರು ಕಟ್ಟಿ ಹಾಕಿದರು. ಅವರು ಗೌರಮ್ಮನ ಶರೀರದ ಮೇಲಿದ್ದ ನಗಗಳನ್ನೆಲ್ಲಾ ತೆಗೆದು, ಮನೆಯೊಳಗೆ ಇನ್ನಿರುವುದನ್ನೂ ದೋಚಿಕೊಳ್ಳಲು ಹುಡುಕುತ್ತಿರುವಾಗ, ಚೋರ ಬಾಗಿಲಿನ ಹೊರಗೆ ಸಂಕಲೆ ಸಿಕ್ಕಿಸಿ, ಓಡಿಹೋಗಿ ರಾಜಭಟರನ್ನು ಕರೆದುಕೊಂಡುಬಂದನು.

ಕಳ್ಳರು ಸಿಕ್ಕಿಬಿದ್ದರು. ರಾಜನು ವಿಚಾರಣೆ ನಡೆಸಿದನು. ನಡೆದ ಸಂಗತಿಯನ್ನೆಲ್ಲಾ ಹೇಳಿದ ಚೋರನಿಗೆ ಸಾವಿರ ರೂಪಾಯಿ ಬಹುಮಾನ ಸಿಕ್ಕಿತು. ಕಳ್ಳಸೊತ್ತನ್ನು ಅಡಗಿಸಿಟ್ಟುದಕ್ಕಾಗಿ ರಂಗೇಗೌಡನಿಗೂ ಗೌರಮ್ಮನಿಗೂ ಸ್ವಲ್ಪ ಕಾಲ ಕಾರಾಗೃಹವಾಸವೂ ಕಳ್ಳರಿಗೆ ದೀರ್ಘಾವಧಿಯ ಕಠಿನ ಕಾರಾಗೃಹವಾಸ ಶಿಕ್ಷೆಯೂ ಬಿದ್ದಿತು.

ಬಡವನಾದ ಚೋರನ ಅದೃಷ್ಟ ತೆರೆಯಿತು. ಬಹುಮಾನ ಹಣದಿಂದ ಚೋರ ಒಂದು ಹೊಲವನ್ನು ಕೊಂಡುಕೊಂಡು ವ್ಯವಸಾಯ ಮಾಡುತ್ತ ನೆಮ್ಮದಿಯಾಗಿ ಇರತೊಡಗಿದನು.



# ಕನಸು ಬಿಟ್ಟಿತು

**ಪೂ**ರ್ವಕಾಲದಲ್ಲಿ ಒಬ್ಬ ರಾಜನಿಗೆ ಕನಸುಗಳ ಹುಚ್ಚು. ಅವನಿಗೆ ಕಥೆಗಳನ್ನು ಕೇಳುವುದಕ್ಕಿಂತಲೂ ಕನಸುಗಳನ್ನು ಕೇಳುವುದರಲ್ಲಿ ಆಸಕ್ತಿಯೂ ಆನಂದವೂ ಹೆಚ್ಚು.

ಆದುದರಿಂದ ತಮಗೆ ಬಂದ ಚಿತ್ರವಿಚಿತ್ರವಾದ ಕನಸುಗಳನ್ನು ಹೇಳಿದವರಿಗೆ ಒಳ್ಳೊಳ್ಳೆಯ ಬಹುಮಾನ ಕೊಡುವುದಾಗಿ ಡಂಗುರ ಹೊಡೆಸಿದನು ಆ ರಾಜ.

ಅದನ್ನು ಕೇಳಿ ದೇಶದ ಮೂಲೆ ಮೂಲೆಗಳಿಂದ ಸಾವಿರಾರು ಜನರು ರಾಜನೊಂದಿಗೆ ತಮ್ಮ ಕನಸುಗಳನ್ನು ಹೇಳಿ ಸಾಧ್ಯವಾದರೆ ಬಹುಮಾನ ಪಡೆಯಬೇಕೆಂದು ರಾಜಧಾನಿಗೆ ಬಂದುಬಿದ್ದರು.

ಹೀಗೆ ಬಂದವರಿಗೆಲ್ಲ ಯಾವ ಕೊರತೆಯೂ ಆಗದಂತೆ ಊಟ ವಸತಿ ಮುಂತಾದ್ದನ್ನು ಏರ್ಪಡಿಸಲು ರಾಜನು ಮಂತ್ರಿಗೆ ಅಪ್ಪಣೆ ಮಾಡಿದನು.

ಮಂತ್ರಿ ಬಂದ ಸಿಟ್ಟನ್ನು ನುಂಗಿಕೊಂಡು, ಎಲ್ಲೆಲ್ಲಿಂದಲೋ ಅನೇಕ ಸಾವಿರ ಕತ್ತೆಗಳನ್ನು ತರಿಸಿ ಕನಸುಗಳನ್ನು ಹೇಳಲು ಬಂದವರ ಬಿಡಾರಗಳ ಸುತ್ತಲೂ ನಿಲ್ಲಿಸಿದನು.

ಯಾರೂ ಹೊರಗೆ ಬಾರದಂತೆ ಕತ್ತೆಗಳು ಅಡ್ಡವಾಗಿರುವ ಸಂಗತಿ ಕೇಳಿ ರಾಜನು ಕತ್ತೆಗಳನ್ನು ಕುರಿತು ಮಂತ್ರಿಯನ್ನು ಕೇಳಿದನು.

"ಮತ್ತೇನಿಲ್ಲ ಮಹಾರಾಜರೆ, ಶ್ರೀಮುಖನೆಂಬ ಧನಿಕನ ಹತ್ತಿರ ಯಾರೋ ಹಾಡುವ ಕತ್ತೆಗಳಿವೆಯೆಂದು ಹೇಳಿದರಂತೆ. ಅಂತಹ ಕತ್ತೆಗಳಿಗಾಗಿ ಅವನೂ ಡಂಗುರ ಸಾರಿದ್ದ. ಆದುದರಿಂದ ದೇಶದಲ್ಲಿದ್ದ ಕತ್ತೆಗಳೆಲ್ಲ ಬಂದಿವೆ. ಅವುಗಳಿಂದ ಹೇಗೆ ಬಿಡುಗಡೆಯೆಂಬುದು ತಿಳಿಯುವುದಿಲ್ಲ. ಅದನ್ನೇ ಕುರಿತು ಆಲೋಚಿಸುತ್ತಿದ್ದೇನೆ. ಕ್ಷಮಿಸಬೇಕು." ಎಂದ ಮಂತ್ರಿ.

ಇದನ್ನು ಕೇಳಿ ರಾಜನ ಕನಸಿನ ಹುಚ್ಚು ಬಿಟ್ಟಿತು !





# ನೀರಿನ ಪ್ರಭಾವ

ಒಂದು ಊರಿನಲ್ಲಿ ವೀರಯ್ಯನೆಂಬ ದೊಡ್ಡ ಈಜುಗಾರನಿದ್ದ. ಈಜಿನಲ್ಲಿ ಮಾತ್ರವಲ್ಲದೆ ಎಂತಹ ಪಾತಾಳದಾಳದ ಬಾವಿಗೂ ಮುಳುಗಿ ಹುಡುಕಿ ತೆಗೆಯುವುದರಲ್ಲಿಯೂ ಗಟ್ಟಿಗನಾಗಿದ್ದ. ಈ ಬಗೆಯ ಅವನ ಜಲಪ್ರಾವೀಣ್ಯತೆಗೆ ಮೆಚ್ಚಿ ಯಾವನೋ ಜಮೀನ್ದಾರನು ಅವನಿಗೊಂದು ಅದ್ಭುತವಾದ ಕಂಚು ವಿಗ್ರಹವನ್ನು ಬಹುಮಾನವಿತ್ತಿದ್ದನು. ಅದನ್ನು ಅವನು ತನ್ನ ಹತ್ತಿರವೇ ಇಟ್ಟುಕೊಂಡಿದ್ದನು. ಅದು ಯಾವುದೋ ವಿದೇಶದಿಂದ ಬಂದ ವಿಗ್ರಹವಾಗಿತ್ತು. ಅದು ಎಷ್ಟು ಹಣ ಕೊಟ್ಟರೂ ಎಲ್ಲಿಯೂ ಸಿಕ್ಕುವಂತಹ ವಿಗ್ರಹವಲ್ಲ.

ಒಂದು ವರ್ಷ ವೀರಯ್ಯ ವಸಂತೋತ್ಸವವನ್ನು ನೋಡಲು ರಾಜಧಾನಿಗೆ ಹೋಗಬೇಕೆಂದು ಮಾಡಿದನು. ತನ್ನ ಅಪೂರ್ವವಿಗ್ರಹವನ್ನು ತನ್ನ ಗುಡಿಸಲಿನಲ್ಲಿಟ್ಟು ಹೋಗಲು ಧೈರ್ಯವಾಗದೆ, ಅದನ್ನು ಸಾವುಕಾರ ಕೃಷ್ಣಯ್ಯನವರಲ್ಲಿಗೆ ತೆಗೆದುಕೊಂಡು ಹೋಗಿ, ತಾನು ಹಿಂದಿರುಗಿ ಬರುವವರೆಗೆ ಇದನ್ನು ಭದ್ರವಾಗಿಟ್ಟುಕೊಂಡಿರುವಂತೆ ಕೇಳಿಕೊಂಡನು. ಇನ್ನೊಂದು ಅಪೂರ್ವ ಸುಂದರ ವಿಗ್ರಹವು ವೀರಯ್ಯನಂತಹ ಬಡವನ ಹತ್ತಿರ ಇರುವುದಕ್ಕಿಂತ, ತನ್ನಂತಹ ಸಂಪನ್ನನ ಹತ್ತಿರ ಇರುವುದೇ ಒಳಿತೆಂದು ಅವರಿಗೆ ತೋರಿತು. ಅಂತಲೇ ಕೃಷ್ಣಯ್ಯ ಅದನ್ನು ತನಗೆ ಮಾರಿಬಿಡುವಂತೆ ಅವನನ್ನು ಕೇಳಿದರು.

"ಇದು ಮಾರುವಂತಹುದಲ್ಲ ಬಿಡಿ. ನಾನು ಹಿಂದಿರುಗಿ ಬರುವವರೆಗೆ ಇಟ್ಟುಕೊಳ್ಳಿ, ಸಾಕು" ಎಂದ ವೀರಯ್ಯ. ಅವನಿಗೆ ಸಂಬಂಧಿಸಿದವರೆಗೆ ಅವನ ಜಲನೈಪುಣ್ಯತೆಗೆ ಅದೊಂದು ಚಿಹ್ನೆ !

"ಎಲೆಲ ! ಎಷ್ಟು ಗರ್ವವೋ ನಿನಗೆ ! ಈ ವಿಗ್ರಹ ನನ್ನ ಸ್ವಂತಕ್ಕೆ ಹೇಗೆ ಬರುವುದಿಲ್ಲವೋ ನೋಡುತ್ತೇನೆ" ಎಂದುಕೊಂಡರು ಕೃಷ್ಣಯ್ಯ. ಆ ವಿಗ್ರಹವನ್ನು ವೀರಯ್ಯನಿಗೆ ತಿರುಗಿ ಕೊಡಕೂಡದೆಂದು ಆಗಲೇ ಗಟ್ಟಿಮಾಡಿಕೊಂಡರು.

ಅವರು ಆ ವಿಗ್ರಹದ ಸಹಾಯದಿಂದ ಅಚ್ಚುಗಳನ್ನು ತಯಾರಿಸಿ ಅಂತಹುದೇ ಒಂದು ಮಣ್ಣಿನ ಬೊಂಬೆಯನ್ನು ಮಾಡಿಸಿ, ಅದರ ಮೇಲೆ ಹಿತ್ತಾಳೆಯ ಲೇಪ ಹಚ್ಚಿಸಿ, ವೀರಯ್ಯ ಹಿಂದಿರುಗಿ ಬಂದ ಕೂಡಲೇ ಅದನ್ನೇ ಕೊಟ್ಟು ಕಳುಹಿಸಿಬಿಟ್ಟರು. ವೀರಯ್ಯ ಅದನ್ನು ಮನೆಗೆ ತೆಗೆದುಕೊಂಡು

ಜಿ. ಸಾಂಬಶಿವ

ಹೋಗಿ ಅದರ ಸ್ಥಾನದಲ್ಲಿ ಇಡುತ್ತಿರುವಾಗಲೇ ಮೋಸವಾಗಿರುವುದನ್ನು ತಿಳಿದುಬಿಟ್ಟನು. ಅದನ್ನು ಗೂಡಿನಲ್ಲಿಡುವಾಗ ಬೆಟ್ಟಿ ಶಬ್ದ ಹೊರಟಿತು. ಅದನ್ನು ಗಟ್ಟಿಯಾಗಿ ಉಜ್ಜಿ ನೋಡಿದಾಗ ಮೇಲಿನ ಲೇಪ ಹೋಗಿ ಒಳಗಿನ ಮಣ್ಣು ಹೆಂಚು ಹೊರಬಿದ್ದಿತು.

ಕೂಡಲೇ ವೀರಯ್ಯ ಆ ವಿಗ್ರಹವನ್ನು ತೆಗೆದು ಕೊಂಡು ಕೃಷ್ಣಯ್ಯನ ಬಳಿಗೆ ಹೋಗಿ. "ಏನಯ್ಯಾ ಇದು? ನನ್ನ ಅಸಲು ವಿಗ್ರಹ ಅಡಗಿಸಿಟ್ಟು ಈ ಮಣ್ಣಿನ ಬೊಂಬೆ ಕೊಡುವಿರಾ? ಇದೇನು ಕೆಲಸ ಸ್ವಾಮಿ? ದೊಡ್ಡ ಮನುಷ್ಯರು ಮಾಡ ತಕ್ಕದ್ದೇನಾ? ತೆಗೆಯಿರಿ, ನನ್ನ ವಿಗ್ರಹ ನನಗೆ ಕೊಟ್ಟು ಬಿಡಿ" ಎಂದನು.

"ಅದೆಲ್ಲಾ ನನಗೇನು ಗೊತ್ತು? ನಿನ್ನ ವಿಗ್ರಹವನ್ನೇ ನಿನಗೆ ಕೊಟ್ಟಿದ್ದೇನೆ. ಒಮ್ಮೆ ಕಪ್ಪಾಯಿತೂ ಅಂತ ನಮ್ಮ ಬಾವಿಯ ನೀರಿನಿಂದ ತೊಳೆದ ಕಾರಣ ನಿನ್ನ ಕಂಚಿನ ವಿಗ್ರಹ ಮಣ್ಣಿನ ವಿಗ್ರಹವಾಯಿತೋ ಏನೋ! ನೀರಿನ ಪ್ರಭಾವವಿರಬೇಕು. ಅದಕ್ಕೆ ಯಾರೇನು ಮಾಡುವರು?" ಎಂದರು ಕೃಷ್ಣಯ್ಯ.

ವೀರಯ್ಯ ಉಪಾಯವಿಲ್ಲದೆ ಸುಮ್ಮನಿದ್ದುಬಿಟ್ಟ. ಆದರೆ ಮರೆಯುವಂತಹ ಸಂಗತಿಯಾಗಿರಲಿಲ್ಲ. ಸಮಯ ಬಂದಾಗ ಕೃಷ್ಣಯ್ಯನಿಗೆ ಬುದ್ಧಿ ಕಲಿಸಬೇಕೆಂದೇ ಮಾಡಿಕೊಂಡಿದ್ದ.

ಹೀಗಿರುವಾಗ ಒಂದು ದಿನ ಸಾಹುಕಾರ ಕೃಷ್ಣಯ್ಯನ ಹೆಂಡತಿ ಊರ ಹೊರಗಿನ ಕುಡಿಯುವ ನೀರಿನ ಬಾವಿಯಲ್ಲಿ ಹಿತ್ತಾಳೆಯ ಬಿಂದಿಗೆಯನ್ನು ಇಳಿಸಿ ನೀರು ಸೇದುವಾಗ, ಹಗ್ಗ ಕಡಿದು ಬಿಂದಿಗೆ ಬಾವಿಯೊಳಗೆ ಬಿದ್ದುಹೋಯಿತು.

ಅದು ಸಾಧಾರಣದ ಬಾವಿಯಲ್ಲ, ಬಹಳ ಆಳ. ಊರಿಗೆಲ್ಲಾ ಅದೊಂದೇ ಕುಡಿಯುವ ನೀರಿನ ಬಾವಿ. ಅದರೊಳಗೆ ಇಳಿದು ಮುಳುಗಿ ಬಿಂದಿಗೆ ತೆಗೆಯುವವನು ವೀರಯ್ಯನೊಬ್ಬನ ಹೊರತು ಬೇರೆ ಯಾರಿಗೂ ಸಾಧ್ಯವಿಲ್ಲ. ವೀರಯ್ಯನನ್ನು ಕರೆಯಲು ಇಷ್ಟವಿಲ್ಲದಿದ್ದರೂ, ಬೇರೆ ಉಪಾಯವಿಲ್ಲದೆ, ಆ ಬಾವಿಗಿಳಿದು ತಮ್ಮ ಬಿಂದಿಗೆ ತೆಗೆದು ಕೊಡುವಂತೆ ಕೃಷ್ಣಯ್ಯ



ವೀರಯ್ಯನನ್ನೇ ಕರೆದು ಕೇಳಿದರು. "ಅದಕ್ಕೇನು ಸಾಹುಕಾರ್ರೇ. ಅದೆಲ್ಲಾ ನನ್ನ ಕರ್ತವ್ಯ ತಾನೆ? ನಾಳೆ ಬೆಳಗ್ಗೆ ನಿಮ್ಮ ಬಿಂದಿಗೆ ಖಂಡಿತ ತೆಗೆದು ಕೊಡುತ್ತೇನೆ" ಎಂದ ವೀರಯ್ಯ.

ಆ ದಿನ ಅರ್ಧರಾತ್ರಿ ದಾಟಿದ ಮೇಲೆ ವೀರಯ್ಯ ಒಂದು ಮಣ್ಣಿನ ಕೊಡವನ್ನು ತೆಗೆದುಕೊಂಡು ಬಾವಿಯ ಬಳಿಗೆ ಹೋಗಿ ಬಾವಿಗಿಳಿದನು. ನೀರಿನೊಳಗೆ ಮುಳುಗಿ ಸಾಹುಕಾರರ ಹಿತ್ತಾಳಿಯ ಬಿಂದಿಗೆಯನ್ನು ಮೇಲೆ ತೆಗೆದು, ಅದಕ್ಕೆ ಕಟ್ಟಿದ ತುಂಡು ಹಗ್ಗವನ್ನು ಬಿಚ್ಚಿ ಮಣ್ಣಿನ ಕೊಡಕ್ಕೆ ಬಿಗಿದು ಅದನ್ನು ಬಾವಿಯೊಳಗೆ ಬಿಟ್ಟು, ಹಿತ್ತಾಳಿಯ ಬಿಂದಿಗೆಯನ್ನು ಒಂದು ಗುಟ್ಟಿನ ಪ್ರದೇಶದಲ್ಲಿ ಅಡಗಿಸಿಟ್ಟು, ಮನೆಗೆ ಹೋಗಿ ಸ್ವಸ್ಥವಾಗಿ ನಿದ್ದೆ ಮಾಡಿದನು.

ಮರುದಿನ ಬೆಳಗ್ಗೆ ಸಾಹುಕಾರರನ್ನು ಆ ಬಾವಿಯ ಹತ್ತಿರ ಕರೆದುಕೊಂಡು ಬಂದು, ಅವರ ಕಣ್ಣೆದಿರಿನಲ್ಲಿಯೇ ಬಾವಿಗಿಳಿದು ನೀರಿನಲ್ಲಿ ಮುಳುಗಿ ಮಣ್ಣಿನ ಕೊಡವನ್ನು ಎತ್ತಿಕೊಂಡು ಮೇಲೆ ಬಂದನು.

ಅದನ್ನು ನೋಡಿ ಸಾಹುಕಾರರು "ಈ ಮಣ್ಣಿನ ಕೊಡ ನನ್ನದಲ್ಲವಲ್ಲಾ? ಯಾರದೋ ಏನೋ! ಇನ್ನೊಮ್ಮೆ ಮುಳುಗಿ ಚೆನ್ನಾಗಿ ಹುಡುಕಿ ನೋಡಪ್ಪಾ" ಎಂದು ಕೇಳಿಕೊಂಡರು.

ವೀರಯ್ಯ ಮತ್ತೆ ಬಾವಿಗಿಳಿದು ಬಹಳ ಹೊತ್ತು ಹುಡುಕಿದಂತೆ ನಟಿಸಿ ಮೇಲೆ ಬಂದು. "ಬಾವಿಯಲ್ಲಿ ಈ ಮಣ್ಣಿನ ಕೊಡದ ಹೊರತು ಬೇರೆ ಏನೂ ಇಲ್ಲ. ಅಂದ ಹಾಗೆ ನೀರಿನ ಪ್ರಭಾವದಿಂದ ಲೋಹವು ಮಣ್ಣಾಗುತ್ತದಂತ ನೀವೇ ಹೇಳಿದ್ದಿರಲ್ಲಾ! ಹಾಗೆಯೇ ನಿಮ್ಮ ಹಿತ್ತಾಳೆಯ ಬಿಂದಿಗೆ ಮಣ್ಣಿನ ಕೊಡವಾಯಿತೇನೋ! ನೀರಿನ ಪ್ರಭಾವ ನಿಮಗೂ ಗೊತ್ತಿದ್ದುದು ತಾನೇ?" ಎಂದನು.

"ಅದು ಬೇರೆ ನೀರು" ಎಂದು ಕೃಷ್ಣಯ್ಯ ಬೇರೆ ಆಳುಗಳನ್ನು ತರಿಸಿ ಹಣ ಕೊಟ್ಟು ಬಾವಿಯ ನೀರನ್ನೆಲ್ಲಾ ತೋಡಿಸಿದರು. ಬಾವಿಯಲ್ಲಿ ಒಡೆದ ಕೊಡಗಳ ಚೂರುಗಳ ಹೊರತು ಮತ್ತೇನೂ ಕಾಣಲಿಲ್ಲ. ಆ ದಿನ ಒಳ್ಳೆಯ ನೀರು ಸಿಕ್ಕದಂತೆ ಮಾಡಿದುದಕ್ಕೆ ಗ್ರಾಮಸ್ಥರೆಲ್ಲಾ ಕೃಷ್ಣಯ್ಯನಿಗೆ ನಾನಾರೀತಿಯಾಗಿ ಹಳಿದಾಡಿದರು.

ಕೃಷ್ಣಯ್ಯ ಆ ದಿನ ರಾತ್ರಿ ರಹಸ್ಯವಾಗಿ ವೀರಯ್ಯನ ಮನೆಗೆ ಹೋಗಿ, ತಾನು ಮೋಸ ಮಾಡಿದೆನೆಂದು ಒಪ್ಪಿಕೊಂಡು ಕ್ಷಮೆ ಕೇಳಿ, ವೀರಯ್ಯನ ವಿಗ್ರಹವನ್ನು ವೀರಯ್ಯನಿಗೆ ಕೊಟ್ಟು, ತನ್ನ ಹಿತ್ತಾಳಿಯ ಬಿಂದಿಗೆಯನ್ನು ಪಡೆದುಕೊಂಡು ಹಿಂದಿರುಗಿದರು. ವೀರಯ್ಯ ಈ ಸುದ್ದಿಯನ್ನು ಬೇರೆ ಯಾರಿಗೂ ಹೇಳಲಿಲ್ಲ.



# ಎಚ್ಚರ

ಅವಂತಿಯರಾಜ ಸುವರ್ಣಸೇನ ಮಹಾರಾಜನ ಸಾಮಂತನಾದ ವೀರಸೇನನು ತಾನು ಸ್ವತಂತ್ರನೆಂದು ಪ್ರಕಟಿಸಿಕೊಂಡು ಕಪ್ಪಕಟ್ಟುವುದನ್ನು ನಿಲ್ಲಿಸಿದನು.

ಆದುದರಿಂದ ಸುವರ್ಣಸೇನನು ವೀರಪಾಲನ ಮೇಲೆ ಯುದ್ಧ ಪ್ರಕಟಿಸಿ. ಯುದ್ಧ ಸನ್ನಾಹ ಮಾಡುವಂತೆ ಮಂತ್ರಿಗೆ ಆಜ್ಞೆಮಾಡಿದನು.

"ಅವಂತಿಯಲ್ಲಿ ಈಗ ಅರಾಜಕ ಪರಿಸ್ಥಿತಿಯಿದೆ. ಅದರ ಮೇಲೆ ಇದು ಮಳೆಗಾಲ. ಆದುದರಿಂದ ಯುದ್ಧಕ್ಕೆ ಇದು ಸಮಯವಲ್ಲ. ಸ್ವಲ್ಪಕಾಲ ತಾಳುವುದು ಒಳ್ಳೆಯದು" ಎಂದ ಮಂತ್ರಿ. ಆದರೆ ರಾಜನು ಅದಕ್ಕೆ ಒಪ್ಪಲಿಲ್ಲ.

ಈ ಮಾತುಗಳನ್ನು ಯುವರಾಜನಾದ ಸುಬುದ್ಧಿ ಕೇಳಿ, ತಂದೆಗೆ ಎಚ್ಚರ ಬರಿಸಬೇಕೆಂದುಕೊಂಡನು. ಆ ದಿನ ಸಾಯಂಕಾಲ ತಂದೆ ವಾಯು ವಿಹಾರಕ್ಕಾಗಿ ತೋಟಕ್ಕೆ ಹೋದಾಗ, ಅವನು ಒಂದು ಮಾವಿನ ಮರಕ್ಕೆ ಬಿಂದಿಗೆಯ ಮೇಲೆ ಬಿಂದಿಗೆಯಂತೆ ನೀರು ಹೊಯ್ಯಿಸುತ್ತಿದ್ದನು.

ಅದನ್ನು ನೋಡಿ ರಾಜನು, "ಮೊದಲೇ ಮಳೆಗಾಲ. ಗಿಡ ಮರಗಳಿಗೆ ನೀರು ಹೊಯ್ಯುವ ಅಗತ್ಯವೇ ಇಲ್ಲ. ಆ ಮಾವಿನ ಮರಕ್ಕೆ ಹಾಗೇಕೆ ನೀರೆ ಹೊಯ್ಯಿಸುತ್ತಿ ವ್ಯರ್ಥವಾಗಿ?" ಎಂದು ಮಗನನ್ನು ಕೇಳಿದನು.

"ನನಗೆ ಬೇಗನೇ ಮಾವಿನ ಹಣ್ಣು ಬೇಕಾಗಿದೆ" ಎಂದ ಸುಬುದ್ಧಿ.

"ಅದಕ್ಕೆ ಇದು ಕಾಲವಲ್ಲವಪ್ಪ?" ಎಂದ ರಾಜ.

"ಯುದ್ಧಕ್ಕೆ ಕಾಲದ ಯೋಚನೆ ಬೇಡದಿದ್ದರೆ ಇದಕ್ಕೆ ಮಾತ್ರ ಕಾಲದ ಯೋಚನೆ ಬೇಕೇನು?" ಎಂದು ಸುಬುದ್ಧಿ ತಿರುಗಿ ಕೇಳಿದ.

ರಾಜನು ಯುದ್ಧ ಪ್ರಯತ್ನ ಈಗ ಬೇಡವೆಂದು ಮಂತ್ರಿಗೆ ಹೇಳಿದನು.





# ಮನೆಹಿಡಿದ ಅಳಿಯ

ಒಂದಾನೊಂದು ಗ್ರಾಮದಲ್ಲಿ ಸಣ್ಣಮ್ಮ ಎಂಬ ವಳಿಗೆ ಸಣ್ಣಪ್ಪ ಎಂಬ ಮಗನಿದ್ದ. ಮಗ ಬೆಳೆದು ದೊಡ್ಡವನಾದಾಗ ಪುಟ್ಟಮ್ಮನೆಂಬ ಹುಡುಗಿಯೊಂದಿಗೆ ಅವನ ಮದುವೆಯಾಯಿತು. ಮದುವೆಯಾದ ಕ್ಷಣದಿಂದಲೂ ಸಣ್ಣಪ್ಪನಿಗೆ ತನ್ನ ಹೆಂಡತಿಯ ಮೇಲೆ ಅಪರಿಮಿತವಾದ ಮೋಹ ಬಂದುಬಿಟ್ಟಿತ್ತು. ಆದರೆ ಮನೆ ಹಿಡಿದು ಕುಳಿತುಕೊಳ್ಳಲು ಸಾಧ್ಯವಿರಲಿಲ್ಲ. ವ್ಯವಸಾಯ ಮಾಡುತ್ತ ಹಗಲೆಲ್ಲ ದುಡಿಯ ಬೇಕಾಗಿತ್ತು ಸಣ್ಣಪ್ಪನಿಗೆ. ಇಲ್ಲದಿದ್ದರೆ ಹೊಟ್ಟೆಗೆ ಟೊಳ್ಳುಬೀಳುತ್ತಿತ್ತು.

ಒಂದುಸಾರಿ ತೌರಿನಲ್ಲಿ ಏನೋ ಒಂದು ವಿಶೇಷ ಬಂದುದರಿಂದ ಪುಟ್ಟಮ್ಮ ಅಲ್ಲಿಗೆ ಹೋದಳು. ಹೆಂಡತಿಯನ್ನು ಬಿಟ್ಟು ಒಂದು ದಿನ ಕೂಡಾ ಇರಲಾಗಲಿಲ್ಲ ಸಣ್ಣಪ್ಪನಿಗೆ. ಅಲ್ಲಿಯ ವಿಶೇಷ ಮುಗಿದ ಕೂಡಲೇ ಕರೆದುಕೊಂಡು ಬರಲಿಕ್ಕಾಗಿ ಮರುದಿನವೇ ತಾನೇ ಮಾವಯ್ಯನ ಮನೆಗೆ ಹೋದನು.

ಮನೆಗೆ ಬಂದ ಅಳಿಯನಿಗೆ ಎಲ್ಲರೂ ಭಾರೀ ಭಾರೀ ಉಪಚಾರ ಮಾಡಿ ಅಡಿಗಡಿಗೂ ಆದರಣೆ ತೋರಿಸಿದರು. ಆ ಉಪಚಾರದ ಮಾಯಕದಲ್ಲಿ ಸಣ್ಣಪ್ಪನಿಗೆ ತಾನು ಬಂದ ಕೆಲಸ ಮರೆತು ಹೋಯಿತು. ತಾನು ಸ್ವರ್ಗದಲ್ಲಿರುವಂತೆ ತೋರಿತು. ಅಲ್ಲಿಯ ವಿಶೇಷವು ಮುಗಿದ ಮರುದಿನದಿಂದ ಪುಟ್ಟಮ್ಮ ಇನ್ನು ಗಂಡ ತನ್ನನ್ನು ಹೊರಡುವಂತೆ ಹೇಳುತ್ತಾನೆಂದುಕೊಂಡು, ಹೊರಡುವ ತಯಾರಿಕೆಯಲ್ಲೇ ಇದ್ದಳಾದರೂ, ಸಣ್ಣಪ್ಪನ ಬಾಯಿಯಿಂದ ಹೊರಡುವ ಮಾತೇ ಹೊರಡಲಿಲ್ಲ. ಯಾವ ಹೆಣ್ಣಿಗಾದರೂ ತೌರುಮನೆಯಲ್ಲಿರುವುದೆಂದರೆ ಅನಿರ್ವಾಚನೀಯ ಆನಂದತಾನೇ? ಅವಳೂ ಮಾತಾಡದೆ ಸುಮ್ಮನಿದ್ದಳು.

ತಿಂಗಳು ಕಳೆದರೂ ಸಣ್ಣಪ್ಪ ಕದಲುವ ಲಕ್ಷಣ ಕಾಣಲಿಲ್ಲ. ಕ್ರಮವಾಗಿ ಅವನ ಮಾವಯ್ಯನಿಗೂ, ಅತ್ತೆಗೂ, ಬಾವ ಮೈದುನರಿಗೂ ಅವನ ಮೇಲೆ ಬದಲಾವಣೆ ಬಂದಿತು. ಅವರು ಅವನ ಎಂಜಲು ಕೈಗೆ ನೀರೆತ್ತಿ ಕೊಡುವುದನ್ನು ನಿಲ್ಲಿಸಿ ಬಾವಿಕಟ್ಟೆ ತೋರಿಸಿದರು. ಇಂತಹ ಸಣ್ಣಪುಟ್ಟ ಬದಲಾವಣೆಗಳನ್ನು ಸಣ್ಣಪ್ಪ ಲಕ್ಷಿಸಲಿಲ್ಲ.

ಒಂದು ದಿನ ಮಾವಯ್ಯ ಹೊಲದ ಕಡೆಗೆ ಹೋಗುವಾಗ, ತಮ್ಮ ಹೊಲವನ್ನು ನೋಡಲು

ಬರುವಂತೆ ಹೇಳಿ ಸಣ್ಣಪ್ಪನನ್ನು ತಮ್ಮ ಜತೆಯಲ್ಲಿ ಕರೆದುಕೊಂಡು ಹೋದರು. ಅಲ್ಲಿ ಆಳುಗಳು ಧಾನ್ಯವನ್ನು ಅಳೆದು ಹಾಕುತಿದ್ದರು. ಧಾನ್ಯ ಅಳೆಯುವ ಸ್ಥಳದಲ್ಲಿ ಸಣ್ಣಪ್ಪನ ದೊಡ್ಡ ಭಾವಯ್ಯ ನಿದ್ದ. ಅವನು ತನ್ನನ್ನು ನೋಡಿ ಕಿರುನಗೆ ಸೂಸದಿರುವುದನ್ನು ನೋಡಿ ಸಣ್ಣಪ್ಪನಿಗೆ ಮುಖಬಾಡಿತು. ಬಾವಯ್ಯನು ಧಾನ್ಯದ ಲೆಕ್ಕಗಳನ್ನು ತಂದೆಗೆ ಒಪ್ಪಿಸಿ ಮನೆಗೆ ಹೋಗುವೆನೆಂದು ಹೇಳಿ ಹೊರಟು ಹೋದನು.

ಸ್ವಲ್ಪಹೊತ್ತಿನ ಮೇಲೆ ಮಾವಯ್ಯ "ಈಗಲೇ ಬರುತ್ತೇನೆ, ನೋಡಿಕೊಂಡಿರು" ಎಂದು ಹೇಳಿ ಎತ್ತಲೋ ಹೋದನು. ಬಾಧ್ಯತೆ ತನ್ನ ಮೇಲೆ ಬಿದ್ದುದರಿಂದ ಸಣ್ಣಪ್ಪನು ಧಾನ್ಯವನ್ನು ಅಳೆಯಿಸಿ ಗಾಡಿಗೇರಿಸಿ ಮನೆಗೆ ತಂದನು.

"ಇದನ್ನು ಮನೆಗೇಕೆ ತಂದೆ? ಅದು ಮನೆಗಾಗಿ ಅಲ್ಲ. ಪಟ್ಟಣಕ್ಕೆ ಕೊಂಡೊಯ್ದು ಮಾರಲಿಕ್ಕೆ. ಹಾಗೇ ಗಾಡಿ ಸಾಗಿಸಿಕೊಂಡು ಪಟ್ಟಣಕ್ಕೆ ಹೋಗಿ ಬಂದು ಬಿಡು" ಎಂದು ಮಾವಯ್ಯ ಹೇಳಿದನು. ಉಪಾಯವಿಲ್ಲದೆ ಸಣ್ಣಪ್ಪ ಪಟ್ಟಣಕ್ಕೆ ಹೋಗಿ ಧಾನ್ಯವನ್ನು ಒಳ್ಳೆಯ ಬೆಲೆಗೇ ಮಾರಿ, ಮೂರು ದಿನಗಳ ಮೇಲೆ ಮನೆಗೆ ಬಂದನು.

ಆ ಮೂರು ದಿನಗಳೂ ಬಹಳ ಶ್ರಮಪಟ್ಟುದರಿಂದ ಶರೀರವೆಲ್ಲ ಹಿಚಿಕಿ ಹಾಕಿದಂತಾಗಿತ್ತು ಅವನಿಗೆ. ಊಟ ತಿಂಡಿ ಸರಿಯಾಗಿರಲಿಲ್ಲ. ಮನೆಯಲ್ಲಿ ಬಿಸಿನೀರು ಸ್ನಾನಮಾಡಿ, ಊಟ ಮುಗಿಸಿ ಸುಖವಾಗಿ ಮಲಗಿಬಿಡಬೇಕೆಂದು ಆಶೆಪಟ್ಟನು.

ಆದರೆ ಮನೆಗೆ ಬಂದು ನೋಡುವಾಗ, ಬಾಗಿಲಿಗೆ ದೊಡ್ಡ ಬೀಗ ಹಾಕಿತ್ತು. ನೆರೆಮನೆಯ ಮೀನಾಕ್ಷಮ್ಮನನ್ನು ಕೇಳಲು, ಪುಟ್ಟಮ್ಮನನ್ನು ಕರೆದುಕೊಂಡು ಎಲ್ಲರೂ ನೆರೆಯ ಊರಿಗೆ ಹೋಗಿದ್ದಾರೆಂದೂ, ಅಲ್ಲಿ ಯಾವುದೋ ಬೀದೀ ಭಾಗವತ ನಡೆಯುತ್ತದೆಂದೂ ತಿಳಿಯಿತು. ಬೇರೆ ಉಪಾಯಗಾಣದೆ ಸಣ್ಣಪ್ಪ ಬೀದಿಯ ಜಗಲಿಯಲ್ಲೇ ಮಲಗಿ ರಾತ್ರಿಯನ್ನು ಬೆಳಗು ಮಾಡಿದನು.



ಬೆಳಗಾದ ಕೂಡಲೇ ನೆರೆಯ ಊರಿನಿಂದ ಗಾಡಿಯಲ್ಲಿ ಎಲ್ಲರೂ ತಿರುಗಿ ಬಂದರು. ಅವರೊಂದಿಗೆ ಪುಟ್ಟಮ್ಮನ ಅಕ್ಕ ಬಾವ ಕೂಡಾ ಬಂದಿದ್ದರು. ಬಂದವರು ಸಣ್ಣಪ್ಪನನ್ನು ಮಾತಾಡಿಸಲೂ ಇಲ್ಲ. ಅವನ ಹಾಗೆಯೇ ಬಂದಿದ್ದ ದೊಡ್ಡ ಅಳಿಯನಿಗೆ ಬಹಳ ಮರ್ಯಾದೆಗಳು ನಡೆಯುತ್ತಿದ್ದುವು. ಅದನ್ನು ನೋಡಿ ಸಣ್ಣಪ್ಪನಿಗೆ ಕೋಪ ಬಂತು.

ಸಣ್ಣಪ್ಪ ಸ್ನಾನ ಮಾಡೋಣವೆಂದುಕೊಂಡು. ಬಿಸಿನೀರು ತೋಡಿಕೊಳ್ಳುತ್ತಿದ್ದಾಗ, ಸಣ್ಣ ಮೈದುನ ಬಂದು, "ಆ ಬಿಸಿನೀರು ನಿಮಗಲ್ಲ, ದೊಡ್ಡ ಬಾವನಿಗೆ. ಅವರ ಸ್ನಾನ ಆದ ಮೇಲೆ ನೀವು ಮಾಡಬೇಕಂತೆ" ಎಂದ.

ಊಟದಲ್ಲಿ ಕೂಡಾ ಸಣ್ಣಪ್ಪನಿಗೆ ಚಟ್ನಿ ಸಾರುಗಳಷ್ಟೇ ಬಡಿಸಲಾಯಿತು. ದೊಡ್ಡ ಅಳಿಯನಿಗೆ ಹಬ್ಬದಡಿಗೆಯ ಊಟವೇ ನಡೆಯಿತು.

ಇದನ್ನೆಲ್ಲ ನೋಡಿ, ಸಣ್ಣಪ್ಪನಿಗೆ ಮೈಯೆಲ್ಲ ಉರಿಯಿತು. ಅವನು ಕೋಣೆಯೊಳಗೆ ಧಡಧಡನೆ ಹೋಗಿ ಪುಟ್ಟಮ್ಮನೊಂದಿಗೆ, "ಏನೇ ಇದು ? ಅವನೊಬ್ಬನೇ ಅಳಿಯನೋ ? ನಾನು ಅಲ್ಲವೇನು ? ನಿನ ಜನರು ನನ್ನನ್ನು ಇಷ್ಟೊಂದು ಅಪಮಾನ ಮಾಡುತ್ತಿರುವಾಗ ನೀನು ನೋಡುತ್ತ ಸುಮ್ಮನಿರುವೆಯಾ ? ಇದು ನಿನಗೂ ಚಂದ ಕಾಣುತ್ತಾ ?" ಎಂದು ಧುಮುಧುಮಿಸಿದ. ಪುಟ್ಟಮ್ಮ ನಿಧಾನವಾಗಿ ಅವನೊಂದಿಗೆ "ಹೌದು ಮತ್ತೆ! ನೀವು ಇಲ್ಲಿ ಬಂದದ್ದು ನನ್ನನ್ನು ಕರಕೊಂಡು ಹೋಗಲಿಕ್ಕೇ ಅಂತ ಮಾಡಿದ್ದೆವು. ಆದರೆ ನೀವು ಅವರೆಲ್ಲ ಮಾಡುವ ಉಪಚಾರಕ್ಕೆ ಉಬ್ಬಿಹೋಗಿ ಹೀಗೆ ಮನೆಯಳಿಯನಾಗಿ ಇರುತ್ತೀರೆಂದು ಯಾರೂ ಅಂದುಕೊಳ್ಳಿಲ್ಲ. ಮೂರು ದಿನ ಇರುವ ಅಳಿಯನಿಗೇ ಮೂರು ಹೊತ್ತೂ ಉಪಚಾರ ಮಾಡುತ್ತಾರಲ್ಲದೆ ತಿಂಗಳುಗಟ್ಲೆ ಇದ್ದರೆ ಮನೆಯವರಿಗೂ ನಿಮಗೂ ಏನು ವ್ಯತ್ಯಾಸ ಬಂದೀತು ? ನೀವು ನನ್ನನ್ನು ಒಯ್ದು ಪೋಷಿಸುತ್ತೀರಿ ಅಂತತಾನೇ ನಿಮಗೆ ನನ್ನನ್ನು ಕೊಟ್ಟು ಮದುವೆ ಮಾಡಿದರೇ ಹೊರತು, ನಿಮ್ಮನ್ನೂ ನನ್ನನ್ನೂ ಇವರೇ ಪೋಷಿಸಿಕೊಳ್ಳಲಿಕ್ಕೆ ಅಲ್ಲವಷ್ಟೆ ? ನಿಮ್ಮ ಬಾವ ಮೈದಂದಿರು ನಿಮ್ಮನ್ನು ಹೇಗೆ ನೋಡುತ್ತಾರೋ, ಅತ್ತಿಗೇಂದಿರು ಕೂಡಾ ನನ್ನನ್ನು ಹಾಗೇ ನೋಡುತ್ತಾರೆ ಗೊತ್ತಾ ? ನಾನು ನನ ಸಂಕಟ ಯಾರಹತ್ರ ಹೇಳಿಕೊಳ್ಲೀ ? ಇನ್ನು ಮೇಲೆ ಬೇಡ, ಇಲ್ಲಿ ಮಾಡಿಸಿಕೊಂಡ ಪೂಜೆ ಸಾಕು. ನಮ್ಮ ಮನೆಗೆ ಹೋಗೋಣ ನಡೀರಿ" ಎಂದಳು.

ಸಣ್ಣಪ್ಪ ತನ್ನದೇ ತಪ್ಪು ಎಂದು ತಿಳಿದುಕೊಂಡನು. ಹೆಂಡತಿಯನ್ನು ಕರೆದುಕೊಂಡು ತನ್ನ ಮನೆಗೇ ಹಿಂದಿರುಗಿದನು.





# ಉದಂಕನ ಕಥೆ

ಉದಂಕನು ಪೈಲನ ಶಿಷ್ಯ. ಅವಗೆ ಗುರುದಕ್ಷಿಣೆಯಾಗಿ ಪೌಷ್ಯನ ಹೆಂಡತಿ ಧರಿಸುವ ಕುಂಡಲಗಳನ್ನು ತಂದು ಕೊಡಬೇಕೆಂದು ಪ್ರಶಸ್ತವಾದ ಪೈಲನ ಹೆಂಡತಿಯ ಕೋರಿಕೆಯಾಗಿತ್ತು.



ಅಂತೆಯೇ ಮಾತುಕೊಟ್ಟು ಉದಂಕನು ಹೋಗಿ ಪೌಷ್ಯನ ಹೆಂಡತಿಯನ್ನು ಒಪ್ಪಿಸಿ ಅವಳ ಕುಂಡಲಗಳನ್ನು ತೆಗೆದುಕೊಂಡನು. ಆದರೆ ತಕ್ಷಕನು ಅವುಗಳನ್ನು ಅಪಹರಿಸಬಹುದೆಂದೂ. ಜಾಗರೂಕತೆಯಿಂದಿರಬೇಕೆಂದೂ ಪೌಷ್ಯನ ಹೆಂಡತಿ ಎಚ್ಚರಿಕೆ ಹೇಳಿದಳು.



ಅವಳು ಹೇಳಿದಂತೆಯೇ ಆಯಿತು. ಉದಂಕನು ತನ್ನ ಗುರುವಿನ ಆಶ್ರಮಕ್ಕೆ ಹಿಂದಿರುಗುವಾಗ, ದಾರಿಯಲ್ಲಿ ಒಂದು ಕೊಳದ ಬದಿಯಲ್ಲಿ ಕುಂಡಲಗಳನ್ನಿಟ್ಟು ಸ್ನಾನಕ್ಕಿಳಿದನು. ತಕ್ಷಕನು ಮಾನವ ರೂಪದಲ್ಲಿ ಬಂದು ಆ ಕುಂಡಲಗಳನ್ನು ಅಪಹರಿಸಿದನು. ಉದಂಕನು ಅವನ ಬೆಂಬತ್ತಿದನು.



ಉದಂಕನು ತನ್ನನ್ನು ಹಿಡಿಯುವ ಸಮಯಕ್ಕೆ ತಕ್ಷಕನು ಹಾವಿನ ರೂಪ ಧರಿಸಿ ಒಂದು ಬಿಲ ದೊಳಗೆ ಪ್ರವೇಶಿಸಿದನು.



ಉದಂಕನು ಒಂದು ಕೋಲಿನಿಂದ ಬಿಲವನ್ನು ತೋಡುತ್ತಾ, ನಾಗಲೋಕಕ್ಕೆ ಹೋಗಲು ನೋಡಿದನು. ಆದರೆ ಅದು ಸಾಧ್ಯವಾಗುವ ಕೆಲಸವಲ್ಲವೆನಿಸಿತು.



ಆದುದರಿಂದ ಅವನು ಇಂದ್ರನನ್ನು ಪ್ರಾರ್ಥಿಸಿದನು. ಇಂದ್ರನು ತನ್ನ ವಜ್ರಾಯುಧದಿಂದ ನಾಗಲೋಕಕ್ಕೆ ದಾರಿ ಮಾಡಿಕೊಟ್ಟನು.



ಪಾತಾಳದಲ್ಲಿ ಉದಂಕನು ಅನೇಕ ವಿಚಿತ್ರಗಳನ್ನು ನೋಡಿದನು. ಇಬ್ಬರು ಸ್ತ್ರೀಯರು ಬಿಳುಪು ಕಪ್ಪು ಬಣ್ಣದ ಹೊಂದಿಕೆಗಳಿಂದ ಒಂದು ಬಟ್ಟೆ ನೇಯುತ್ತಿದ್ದರು. ಆ ಬಿಳುಪೇ ಹಗಲು, ಕಪ್ಪೇ ರಾತ್ರಿ.



ಮತ್ತೊಂದು ಕಡೆಯಲ್ಲಿ ಆರು ಮಂದಿ ಮನುಷ್ಯರು ಹನ್ನೆರಡು ಎಲೆಗಳಿರುವ ಚಕ್ರವನ್ನು ತಿರುಗಿಸುತ್ತಿದ್ದರು. ಆ ಮನುಷ್ಯರೇ ಋತುಗಳು. ಚಕ್ರದ ಎಲೆಗಳೇ ಹನ್ನೆರಡು ತಿಂಗಳುಗಳು.



ಉದಂಕನಿಗೆ ಸಮೀಪದಲ್ಲಿ ಒಬ್ಬ ದಿವ್ಯ ಪುರುಷನು ಕದುರೆಯ ಮೇಲಿದ್ದನು. ಆ ದಿವ್ಯ ಪುರುಷನೇ ಇಂದ್ರ. ಉದಂಕನು ಆ ಪುರುಷನೊಂದಿಗೆ ತನ್ನ ಕುಂಡಲಗಳನ್ನು ಕೊಡಿಸುವಂತೆ ಪ್ರಾರ್ಥಿಸಿದನು.



ದಿವ್ಯ ಪುರುಷನ ಪ್ರೇರಣೆಯಿಂದ, ಕುದುರೆಯ ಬಾಯಿ ಮೂಗುಗಳಿಂದ ಅಗ್ನಿಜ್ವಾಲೆಗಳು ಹೊರಟು ನಾಗಲೋಕವನ್ನು ಸಂಕ್ಷೋಭಗೊಳಿಸಿದುವು.

ನಾಗರಿಗೆ ಪ್ರಾಣಭೀತಿಯುಂಟಾದುದನ್ನು ನೋಡಿ ನಾಗರಾಜನಾದ ತಕ್ಷಕನು ಕುಂಡಲಗಳನ್ನು ತಂದು ಉದಂಕನಿಗೆ ಹಿಂದಿರುಗಿ ಕೊಟ್ಟನು.





ಉದಂಕನು ದಿವ್ಯ ಪುರುಷನ ಕುದುರೆಯನ್ನೇರಿ ಅಲ್ಲಿಂದ ಹಿಂದಿರುಗಿ, ಗುರುಪತ್ನಿಗೆ ಆ ಕುಂಡಲಗಳನ್ನು ತಂದುಕೊಟ್ಟನು. ಅವಳು ವ್ರತವನ್ನು ಮುಗಿಸುವುದರೊಳಗೆ ಕುಂಡಲಗಳು ಬರಲಾರವೇನೋ ಎಂದು ಹೆದರಿದ್ದಳು. ಉದಂಕನು ಮಾತು ತಪ್ಪದೆ, ಅವಳ ಭಯವನ್ನು ಹೋಗಲಾಡಿಸಿದನು.

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

?

ಒಂದು ಊರಿನಲ್ಲಿ ಒಬ್ಬ ದೊಡ್ಡ ಮನುಷ್ಯನು ಸಂಧಿವಾತದಿಂದ ಸಂಕಟ ಪಡುತ್ತ ದಿನಾ ಗುಡಿಗೆ ಹೋಗಿ, "ಸ್ವಾಮಿ, ನನ್ನನ್ನು ನೀನೇ ಕಾಪಾಡಬೇಕು. ವಾತದ ನೋವು ಕೊಲ್ಲುತ್ತಿದೆ. ನಿನ್ನ ಭಕ್ತ ನಾನು. ಎಷ್ಟು ಮಂದಿ ಭಕ್ತರನ್ನು ನೀನು ಕಾಪಾಡಲಿಲ್ಲ? ನನ್ನ ಕಷ್ಟ ತೀರಿಸುವುದು ನಿನಗೊಂದು ದೊಡ್ಡದೆ?" ಎಂದು ಪ್ರಾರ್ಥಿಸುತ್ತಿದ್ದನು.

ಒಂದು ದಿನ ಆ ದೊಡ್ಡ ಮನುಷ್ಯ ಪ್ರಾರ್ಥನೆ ಮುಗಿಸಿ ಹೊರಡುವ ಹೊತ್ತಿನಲ್ಲಿ, ಗುಂಡುಗಲ್ಲಿನಂತಿದ್ದ ದೊಡ್ಡ ಮನುಷ್ಯನೊಬ್ಬ ದೇವರನ್ನು ನೋಡಿ, "ಸ್ವಾಮಿ, ನನಗೆ ಕಾಲೋ ಕೈಯೋ ಬಿದ್ದುಹೋಗುವ ಹಾಗೆ ಮಾಡು. ಗುಣವಾಗದಂಥ ಸಂಕಟ ಬರಿಸು. ಅದು ನಿನಗೊಂದು ದೊಡ್ಡ ಕೆಲಸವಲ್ಲ" ಎಂದು ಪ್ರಾರ್ಥಿಸಿದನು.

"ಅದೇನಯ್ಯ, ಕಷ್ಟಗಳು ಬೇಕೆಂದು ದೇವರನ್ನು ಕೇಳುವೆಯಲ್ಲಾ?" ಎಂದು ಸಂಧಿವಾತದವನು ಕೇಳಿದನು.

ಅದಕ್ಕೆ ಗುಂಡುಗಲ್ಲಿನಂಥವನು, "ಅಯ್ಯಾ, ಎಷ್ಟು ಪ್ರಯತ್ನಿಸಿದರೂ ನನಗೆ ದೇವರ ಮೇಲೆ ಭಕ್ತಿ ಬರುವದೇ ಇಲ್ಲ. ನಿನ್ನ ಹಾಗೆ ರೋಗಕ್ಕೂ ನೋವಿಗೂ ಗುರಿಯಾದರೆ ಭಕ್ತಿ ಬಂದೀತೆಂದು ಆಸೆ" ಎಂದನು.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟ್‌ಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು, "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಅಕ್ಟೋಬರ್ ೧೫ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೮ ಡಿಸೆಂಬರ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಆಗಸ್ಟ್ ಸ್ಪರ್ಧೆಯ ಫಲಿತಾಂಶ: ನೀಚತ್ವದ ಉಚ್ಛ್ರಕಸ

ಕಳುಹಿಸಿದವರು: ಕೆ. ವಿ. ಮಾಲತೀ ರಾವ್, D/o ಕೆ. ಜಿ. ವಾಸುದೇವರಾವ್, ಸೊರಬ ರಸ್ತೆ, ಸಾಗರ, ಶಿವಮೊಗ್ಗ, ಕರ್ನಾಟಕ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೭೭ರ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ





Gopal Shroti — Devidas Kasbekar

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಅಕ್ಟೋಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಆಗಸ್ಟ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಎಡಗೈ ತಿಂಡಿ ಅಲ್ಪವಾದರೂ

ಎರಡನೇ ಫೋಟೋ: ಬಲವರ್ಧನಾಶ್ರಯ ದೊಡ್ಡದೇ

ಕಳುಹಿಸಿದವರು: ಕೆ. ಡಿ. ಅಚ್ಚಪ್ಪ (ಪ್ರಭು)

ಆರ್ಜಿಗ್ರಾಮ, ವಿರಾಜ ಪೇಟೆ, ಕೊಡಗು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.



# ಕರಡಿಕೆಂಗಣ್ಣ

೩

[ಅರಣ್ಯಪ್ರಾಂತದ ಗ್ರಾಮಗಳಲ್ಲಿ ಸುಲಿಗೆ ಮಾಡುವವರನ್ನು ಕಾಳೀವರ್ಮನು ಓಡಿಸಿದರೆ, ಆ ಕಳ್ಳರು ನೆರೆದೇಶವನ್ನು ಸೇರಿದರು. ಆ ಕಳ್ಳರ ದೆಸೆಯಿಂದಾಗಿ ನೆರೆದೇಶದ ರಾಜನು ಶತ್ರುವಾದನು. ಅದಕ್ಕೆ ಹೆದರಿದ ಜಿತಕೇತುರಾಜ ಕಾಳೀವರ್ಮನಿಗೆ ಮರಣಶಿಕ್ಷೆ ಕೊಟ್ಟ. ಕಾಳೀವರ್ಮ ಕಟುಕನಾಯಕನ ಕೊಡಲಿಯನ್ನು ಸೆಳೆದು ಅಶ್ವಿಕನಾಯಕನ ತಲೆ ಕಡಿದ. ಆ ಕ್ಷಣದಲ್ಲಿ ಆದಿಭಲ್ಲೂಕನಾಯಕನ ಜಯಜಯಕಾರ ಕೇಳಿಸಿತು.]

ವಿಚಿತ್ರವಾದ 'ಆದಿಭಲ್ಲೂಕ' ಎಂಬ ಜಯಕಾರವು ಕಿವಿಗಳಲ್ಲಿ ಮಾರ್ಮೊಳಗಿದಾಗ, ಅಶ್ವಿಕರೆಲ್ಲಾ ಇದೇನು ಹೊಸ ಆಪತ್ತೋ ಎಂದುಕೊಂಡು ಆ ಶಬ್ದ ಬರುವ ಕಡೆಗೆ ತಲೆ ತಿರುಗಿಸಿ ನೋಡಿದರು.

ಇದೀಗ ಕಾಳೀವರ್ಮ ಇದಿರು ನೋಡುತ್ತಿರುವ ಒಳ್ಳೆಯ ಸಮಯ. ಅವನು ತಟ್ಟನೆ ಕುದುರೆಯಿಂದಿಳಿದು ಅಶ್ವಿಕನಾಯಕನ ಹತ್ತಿರವಿದ್ದ ತನ್ನ ಕತ್ತಿಯನ್ನು ತಟ್ಟನೆತ್ತಿಕೊಂಡು ತನ್ನ ಒರೆಗೆ ಸೇರಿಸಿಕೊಂಡುದು ಯಾರಿಗೂ ಗೊತ್ತಾಗಲಿಲ್ಲ. ಎಲ್ಲರೂ ಭಯಶಂಕಿತ ನೋಟದಿಂದ ಆ ಹೊಸ ಗರ್ಜನೆಯ ಕಡೆಗೇ ನೋಡುತ್ತಿದ್ದಾರೆ. ಕಾಳೀವರ್ಮನಿಗೆ ಓಡಲು ಇದೊಳ್ಳೇ ಸಮಯವಾದರೂ ಆ ಹೊಸ ಶಬ್ದ ಅವನನ್ನೂ ಆಕರ್ಷಿಸಿ ನಿಲ್ಲಿಸಿಬಿಟ್ಟಿತ್ತು.

ಗುಡ್ಡದ ಇಳಿಜಾರಿನಲ್ಲಿ ಧುಮುಕುತ್ತಿರುವ ಜಲಪಾತದ ಹಿಂದಿನಿಂದ ಆಜಾನುಬಾಹುವಾದೊಂದು ವ್ಯಕ್ತಿ ಈಕಡೆಗೇ ಬರುತ್ತಿದೆ! ರಕ್ಕಸನಂತೆ ಕಾಣುವ ಆ ಮನುಷ್ಯಾಕೃತಿ ಯಾರದೋ? ಈ ಮೊದಲು ಅಲ್ಲಿನವರಾರೂ ಅವನನ್ನು ಕಂಡಂತಿಲ್ಲ. ಆ ಶಿರೀಷವನದಲ್ಲಿರುವ ಪ್ರಧಾನ ಕಟುಕನಿಗೂ ಅವನು ಅಪರಿಚಿತನಾಗಿದ್ದಾನೆಂದು ಅವನ ನೋಟದಿಂದಲೇ ತಿಳಿಯು



ತ್ತಿತ್ತು. ಯಾರು ಆ ಹೊಸಬ? ಏಕೆ ಬರುತ್ತಾನೆ? "ಅವನಾವನೋ ಮಾಯಾ ಮಾಂತ್ರಿಕನಾಗಿರಬೇಕು. ಅವನು ಯಾರಾದರೆ ನನಗೇನು? ತಪ್ಪಿಸಿಕೊಳ್ಳುವುದೀಗ ಮುಖ್ಯ" ಎಂದುಕೊಂಡು ಕಾಳೀವರ್ಮ ತಪ್ಪಿಸಿಕೊಳ್ಳುವ ಮಾರ್ಗ ಹುಡುಕಿದನು. ತಾನು ಹೋಗುವ ದಾರಿಗೆ ಅಡ್ಡವಾಗಿ ಆಶ್ವಿಕರು ಬಂದು ತಡೆಯಬಹುದೇನೋ ಎಂದು ಅವರ ದೃಷ್ಟಿಯನ್ನು ಪರೀಕ್ಷಿಸಿದನು. ಅವರಲ್ಲೊಬ್ಬನ ದೃಷ್ಟಿಯೂ ತನ್ನ ಮೇಲಿಲ್ಲವೆಂದು ಗೊತ್ತಾಯಿತು. ಎಲ್ಲರೂ ಜಲಪಾತದ ದಿಕ್ಕನ್ನೇ ಭಯಾಶ್ಚರ್ಯಗಳಿಂದ ನೋಡುತ್ತಿದ್ದಾರೆ.

ಆ ದೀರ್ಘಕಾಯನು ಜಲಪಾತದ ಮುಂದೆ ಬಂದು, ಮೊಣಕಾಲಿನಷ್ಟು ನೀರಿನ ಪಾಯವನ್ನು ದಾಟಿ ಈಚೆಗೆ ಬಂದು ಮುಂದೆ ಬರತೊಡಗಿದನು. ತುಂಬ ಬಲಶಾಲಿಯಂತೆ. ತನ್ನ ಬಲದಲ್ಲಿ ಅಪಾರ ನಂಬುಗೆಯುಳ್ಳವನಂತೆ ಕಾಣುತ್ತಿದ್ದನು. ಅವನ ಕಣ್ಣುಗಳು ಕೆಂಪಗೆ ಕೆಂಡಗಳಂತಿದ್ದುವು. ಅವನು ಧರಿಸಿದ್ದು ಬಟ್ಟೆಯೇ ಅಲ್ಲ. ಕರ್ರಗಿನ ರೋಮಮಯವಾಗ ಕರಡಿಯ ಚರ್ಮ. ಕೈಯಲ್ಲಿ ದೃಢವಾದೊಂದು ದಂಡವಿದೆ. ಕತ್ತಿ, ಗದೆ, ಶೂಲಗಳ ಕೆಲಸವನ್ನೆಲ್ಲ ಆ ದಂಡವೇ ಮಾಡಬಲ್ಲುದೇನೋ! ಅದರ ಹಿಡಿಯಲ್ಲಿರುವ ಕರಡಿ ಮುಖದಲ್ಲಿ ಉಜ್ವಲವಾದೊಂದು ವಜ್ರ ಜಗಜಗಿಸುತ್ತಿತ್ತು. ದಂಡದ ಕರಡಿಮುಖದ ಬಾಯಿಯೂ ತೆರೆದು ಮುಚ್ಚುವ ಚಲನೆ ಭಯಂಕರವಾಗಿತ್ತು.

ಕಾಳೀವರ್ಮನು ಧೈರ್ಯದಿಂದ ತನ್ನ ಹತ್ತಿರ ಬರುವ ಭೀತಾವಹರನ್ನು ಲಕ್ಷ್ಯಮಾಡದೆ ಈ ಕಡೆಯೇ ಬರುವ ಆ ವಿಚಿತ್ರವೇಷದವನ ಸಮಾಚಾರವೇನೆಂದು ತಿಳಿಯುವ ಕುತೂಹಲದಿಂದ ಸುಮ್ಮನೆ ನಿಂತನು. ಅವನು ಸಮೀಪ ಬರುತ್ತಿದ್ದಂತೆ ಉಳಿದವರೆಲ್ಲ ಕೈಕಾಲಿನ ಬಲವನ್ನೇ ಹೋಗಲಾಡಿಸಿಕೊಂಡವರಂತೆ, ಅವನ ಮಂತ್ರಶಕ್ತಿಗೊಳಗಾದವರಂತೆ ನಿಂತಿದ್ದರು. ತನಗೂ ಅಂತಹುದೇನಾದರೂ ಬಡಿದಿದೆಯೋ ನೋಡಿಕೊಂಡು, ಇಲ್ಲವೆಂದು ಮುಗುಳುನಕ್ಕು ಧೈರ್ಯಗೊಂಡನು ಕಾಳೀವರ್ಮ.

ಕರಡಿ ಚರ್ಮದವನು ಹತ್ತಿರ ಬಂದು, "ಬಂದು ಬಿಟ್ಟೆ. ನಾನು ಸಮಯಕ್ಕೆ ಸರಿಯಾಗಿ ಆದಿಭಲ್ಲೂಕನ ನಾಮ ಘೋಷ ಮಾಡದಿರುತ್ತಿದ್ದರೆ ಇಲ್ಲಿ ಇನ್ನಿಷ್ಟು ರಕ್ತಪಾತವಾಗಿ ಬಿಡುತ್ತಿತ್ತು. ನಾನು ಯಾರೆಂಬುದು ನಿಮಗೆ ಗೊತ್ತಿಲ್ಲ. ನನ್ನ ಹೆಸರು ಕರಡಿಕೆಂಗಣ್ಣ. ಮಾಂತ್ರಿಕ ಕಲೆ ನನಗೆ ಕರತಲಾಮಲಕ. ಆದ್ದರಿಂದ ಎಲ್ಲರೂ ಜಾಗ್ರತೆಯಾಗಿರಿ" ಎಂದನು.

ಒಂದು ನಿಮಿಷ ಯಾರೂ ಮಾತಾಡಲಿಲ್ಲ. ಕಾಳೀವರ್ಮನು ಬಲಗೈಯಲ್ಲಿ ಕತ್ತಿಯನ್ನೂ, ಎಡಗೈಯಲ್ಲಿ ಕಟಾಕನಿಂದ ಎಳೆದುಕೊಂಡ ಕೊಡಲಿಯನ್ನೂ ಮೇಲೆತ್ತಿ ಹಿಡಿದು ಕರಡಿಕೆಂಗಣ್ಣನೊಂದಿಗೆ, "ಬಹಳ ಒಳ್ಳೆಯ ಮಾತು ಹೇಳಿದಿರಿ! ಮಹಾನುಭಾವರು!

ಕೇಳುವ ಶ್ರಮವನ್ನೇ ಕೊಡದೆ ನಿಮ್ಮ ಯೋಗ್ಯತೆ ಕೂಡಾ ಒಂದೇ ಮಾತಿನಲ್ಲಿ ಹೇಳಿದಿರಿ. ನೀವು ಹೇಳಿದಂತೆ ಸ್ವಲ್ಪದರಲ್ಲಿ ಇನ್ನಿಷ್ಟು ರಕ್ತಪಾತ ತಪ್ಪಿತು. ಈಗ ನನ್ನ ದಾರಿಗೆ ಯಾರಾದರೂ ಅಡ್ಡ ಬಂದರೆ ಇನ್ನಿಷ್ಟು ತಲೆಗಳು ನೆಲಕ್ಕೆ ಬೀಳಲಿವೆ ! ಜಾಗ್ರತೆ !" ಎಂದವನೇ ತನ್ನ ಕುದುರೆಯನ್ನು ತಟ್ಟಿ ಮುಂದಕ್ಕೆ ಹೊರಡಿಸಿದನು.

"ಧೈರ್ಯಶಾಲಿ ನೀನು ! ಸ್ವಲ್ಪ ನಿಲ್ಲು" ಎಂದು ಕರಡಿಕೆಂಗಣ್ಣನು ತನ್ನ ಮಂತ್ರದಂಡದಿಂದ ಕೋಣನ ಮೇಲೆ ಮರಗಟ್ಟಿ ಕುಳಿತಿದ್ದ ಕಟುಕ ನಾಯಕನನ್ನು ಮೆಲ್ಲನೆ ತಿವಿದು, "ಲೋ, ಮುಸುಗಿನೊಳಗಿರುವವನೇ ? ನೀನು ಈ ಶಿರೀಷವನದ ಪಿಶಾಚಿಯೋ ಅಲ್ಲ ಸಾಕ್ಷಾತ್‌ಯಮನೋ. ಅಥವಾ ರಾಜನಿಂದ ನಿಯಮಿಸಲ್ಪಟ್ಟ ಪ್ರಧಾನ ಕಟುಕಮನುಷ್ಯನೋ ? ಯಾರು ನೀನು ? ಸತ್ಯಬೊಗಳು" ಎಂದು ಕೇಳಿದನು.

"ನಾನು ಪಿಶಾಚಿಯಲ್ಲ ಸ್ವಾಮೀರಾ ! ಸಾಧಾರಣ ಮನುಷ್ಯನೇ. ಸತ್ಯಪ್ರಮಾಣಕ್ಕೊ ಮಹಾರಾಜರ ಪ್ರಧಾನ ಕಟುಕ. ಶಿಕ್ಷಿಸಲ್ಪಟ್ಟವರ ತಲೆಕಡಿಯುವುದೇ ನನ್ನ ಕೆಲಸ" ಎಂದನು.

ಇಷ್ಟರಲ್ಲಿ ಕೆಂಗಣ್ಣ ಮಾಂತ್ರಿಕನ ವೇಷ ನೋಡಿ ಹೆದರಿ ಓಡಲು ಪ್ರಯತ್ನಿಸುವ ತನ್ನ ಕೋಣವನ್ನು ತಟ್ಟಿ ಪೂಸಿ ನಿಲ್ಲಿಸಿದನು.

"ಹಾಗಾದರೆ ನೀನೀಗ ಒಂದು ಸಮಸ್ಯೆಗೆ ಬಿದ್ದಿರುವಿ ಎಂದಾಯಿತು. ಶಿರಚ್ಛೇದ ಶಿಕ್ಷೆಯನ್ನು ತಪ್ಪಿಸಿಕೊಂಡದ್ದು ಮಾತ್ರವಲ್ಲದೆ, ಒಬ್ಬ ರಾಜಸೇವಕನ ತಲೆಯನ್ನು ಕೂಡಾ ಕಡಿದು ಓಡಿಹೋಗಲು ನೋಡುವ ಈ ಆರೋಪಿಯನ್ನು ಏನು ಮಾಡಬೇಕೆಂದಿರುವಿ ? ಸುಮ್ಮನೆ ನೋಡುತ್ತ ನಿಂತಿರುವಿಯಲ್ಲಾ ?" ಎಂದು ಕೇಳಿದ ಕರಡಿಕೆಂಗಣ್ಣ.

"ಅಯ್ಯಾ, ನಾನೀಗ ನಿರಾಯುಧನಾಗಿದ್ದೇನೆ. ನನ್ನ ಕೊಡಲಿಯನ್ನು ಈ ಆರೋಪಿ ಬಲವಂತವಾಗಿ ಕಿತ್ತುಕೊಂಡಿದ್ದಾನೆ. ಅದೊಂದು ನನ್ನ ಕೈಯಲ್ಲಿದ್ದರೆ..." ಎನ್ನುತ್ತಿರಲು, ಕಾಳೀವರ್ಮನು "ಇಕೋ, ಇನ್ನಾದರೂ ಕೊಡಲಿ ಗಟ್ಟಿಯಾಗಿ ಹಿಡಿದುಕೋ !" ಎಂದು ಕೊಡಲಿಯನ್ನು ಅವನ ಕಡೆಗೆ ಚಾಚಿದನು.



ಈ ಮಾಂತ್ರಿಕನು ತನ್ನ ಮೇಲೆ ಅಶ್ವಿಕರನ್ನೂ ಕಟುಕನನ್ನೂ ಹುರುಡಿಸಿಬಿಡುವನೆಂದು ಕಾಳೀವರ್ಮನಿಗೆ ತೋರಿತು. "ಎಲೋ ಮುಸುಗುಪಿಶಾಚಿ ಕಟುಕಾ. ತೊಡೆನಡುಕಾ ! ತಕೋ ನಿನ್ನ ಕೊಡಲಿ ! ನನ್ನನ್ನು ಅಡ್ಡಗಟ್ಟಲು ಸಾಧ್ಯವೋ ನೋಡು. ಬಾಯಿಯಲ್ಲಿ ಮಾತಾಡಿದ ಹಾಗಲ್ಲ, ಬಾ ಮುಂದೆ !" ಎಂದ ಕಾಳೀವರ್ಮ.

ಆದರೆ ಕಟುಕನು ಕೆರಳಿ ಏಳುವುದಕ್ಕೆ ಬದಲಾಗಿ, ತನ್ನ ಮುಸುಗು ತೆಗೆದು ದೂರ ಬಿಸುಟು, ತಡಬಡಿಸುವ ಕಂಠದಿಂದ "ಕಾಳೀವರ್ಮಾ, ನೀನು ಮಹಾ ಶೂರನು. ಶಿರೀಷ ವನದ ಭೈರವನ ಸಾಕ್ಷಿಯಾಗಿ ಹೇಳುತ್ತೇನೆ. ನನ್ನ ಅಹಂಕಾರ ಜರ್ರನೆ ಇಳಿದು



ಹೋಯಿತು. ನಾನು ಕೇವಲ ದಾಸಾನುದಾಸನಾದ ಕೊಲೆಗಡುಕ, ಅಷ್ಟೇ." ಎಂದು ಕೈ ಮುಗಿದನು.

"ಅಹಂಕಾರದೊಂದಿಗೆ ಕುಡಿದ ಮಾಯಕವೂ ಬಿಟ್ಟು ಹೋಗಿರಬೇಕು. ಸರಿಸರಿ, ಇನ್ನು ದಾರಿ ಬಿಡು" ಎಂದು ಕಾಳೀವರ್ಮ, ಸ್ವಲ್ಪ ದೂರದಲ್ಲಿರುವ ಆಶ್ವಿಕರನ್ನು ನೋಡಿ, "ನಿಮ್ಮ ಸಮಾಚಾರವೇನು ? ಮಹಾವೀರರಾದ ಯೋಧರಲ್ಲವೇ ನೀವು ? ನಿಮ್ಮ ನಾಯಕನು ಹಿಡಿದ ದಾರಿಯನ್ನು ನೋಡಿದಿರಷ್ಟೆ? ಆ ದಾರಿಯಲ್ಲೇ ಹೋಗುವವರಾದರೆ, ನನ್ನನ್ನು ತಡೆಯಿರಿ ! ಬನ್ನಿ ಮುಂದೆ !" ಎಂದನು.

"ಇಲ್ಲಿ ನಡೆದುದನ್ನು ಕಣ್ಣಾರೆ ನೋಡಿದೆವು. ಮರಣ ಶಿಕ್ಷೆ ಅಮಲುಪಡಿಸಬೇಕಾದವರಲ್ಲಿ ಒಬ್ಬರು ಸತ್ತರು. ಎರಡನೆಯವನು ಶರಣಾಗತನಾದ. ಈ ಸಂಗತಿಯನ್ನೆಲ್ಲಾ ಮಹಾರಾಜರಿಗೆ ಅರಿಕೆ ಮಾಡುವುದಷ್ಟೇ ನಮ್ಮ ಕೆಲಸ. ಬೇಕಂತ ಆಪತ್ತಿನೆಡೆಗೆ ಕೊರಳೊಡ್ಡುವಂಥ ಮೂರ್ಖರಲ್ಲ ನಾವು. ಗರ್ವವೂ ಅಧಿಕಾರವೂ ನಮಗಿಲ್ಲ." ಎಂದರು ಆಶ್ವಿಕರು.

"ಬುದ್ಧಿವಂತರೇ ನಿಜ!" ಎಂದು ಕಾಳೀವರ್ಮನು ಕುದುರೆಯ ಬೆನ್ನನ್ನು ಚಪ್ಪರಿಸಿ, ತಪ್ಪಿಸಿಕೊಳ್ಳಲು ಸಿದ್ಧನಾದನು. ಆಗ ಕರಡಿ ಕೆಂಗಣ್ಣನು "ಆಹಾ! ಭಲ್ಲೂಕ ಪಾದಗುರುಗಳೇ! ನಮಗೆ ಬೇಕಾದ ಜಾತಕದವನು ಸಿಕ್ಕಿದನು." ಎಂದು ಗಟ್ಟಿಯಾಗಿ ತನಗೆತಾನೇ ಕೂಗಿ, ಕಾಳೀವರ್ಮನ ಕುದುರೆಯ ಕಡಿವಾಣವನ್ನು ಹಿಡಿದು ನಿಲ್ಲಿಸಿ, "ಕಾಳೀವರ್ಮ, ಇಲ್ಲಿ ಅಡ್ಡಗುಡ್ಡದ ಹಾಗೆ ಮಹಾಮಾಂತ್ರಿಕನಾದ ಈ ಕರಡಿಕೆಂಗಣ್ಣ ನಿರುವ ಸಮಾಚಾರವನ್ನು ಮರೆತೆಯೇನು ?" ಎಂದು ತಡೆದನು.

ಕಾಳೀವರ್ಮನಿಗೆ ಚಿಕ್ಕಂದಿನಿಂದಲೂ ಮಂತ್ರ, ಮಾಯೆ, ಭೂತ ವೈದ್ಯ ಮುಂತಾದವುಗಳಲ್ಲಿ ನಂಬಿಗೆ ಇರಲಿಲ್ಲ. ಅವರಲ್ಲಿ ಗೌರವವೂ ಅವನಿಗಿಲ್ಲ. ಅಂತಹ ಎಷ್ಟೋ ಮಂದಿಯನ್ನು ಅವನು ತನ್ನ ಗ್ರಾಮದಲ್ಲಿಯೇ ನೋಡಿದ್ದನು. ಅದೆಲ್ಲ ಮೂಢನಂಬಿಗೆಯ ಕುರುಡುತನವೆಂದೇ ತೀರ್ಮಾನಿಸಿಕೊಂಡಿದ್ದನು.

ಕರಡಿಕೆಂಗಣ್ಣನ ಮಾತು ಕೇಳಿ, ಅವನು ತನ್ನನ್ನು ತುಚ್ಛೀಕಾರ ಮಾಡುವನೆಂದುಕೊಂಡು ಕೋಪದಿಂದ, "ನಿಮ್ಮ ಹೆಸರೇನಂದಿರಿ ? ಕರಡಿಕೆಂಗಣ್ಣ! ಅದರ ಮೇಲೆ ಮಹಾಮಾಂತ್ರಿಕರು! ಯಾರೋ ಭಲ್ಲೂಕ ಪಾದರೆಂಬ ಗುರುಗಳೂ ನಿಮಗಿದ್ದಾರೆ. ಅವರಾರೋ? ಎಲ್ಲಿದ್ದಾರೋ? ಅವರೂ ನಿಮ್ಮ ಹಾಗೇ ಕರಡಿ ಚರ್ಮದೊಳಗಿನವರೇ ಏನು ? ಹಾಗಿದ್ದರೆ ನಿಮಿಬ್ಬರ ಗುರುತು ಹಿಡಿಯಲು ನಮ್ಮಂಥವರಿಗೆ ಬಹಳ ಕಷ್ಟ!" ಎಂದನು.

ಕಾಳೀವರ್ಮನು ತನ್ನ ಹೆಸರನ್ನು ಅಪಹಾಸ್ಯ ಮಾಡಿ ಮಾತಾಡಿದರೂ ಕರಡಿಕೆಂಕಣ್ಣನು ಸಿಟ್ಟಾಗದೆ, ಮುಗುಳು ನಗು ಸೂಸುತ್ತ, "ನನ್ನ ಗುರುಗಳ ಹೆಸರು ಭಲ್ಲೂಕಪಾದರು. ನಮ್ಮಿಬ್ಬರನ್ನು ನೋಡಿದರೆ ನಿನಗೆ ಯಾವ ಗಜಿಬಿಜಿಯೂ ಆಗದು.

ನೋಡುವೆಯಂತೆ. ಇನ್ನು ಮುಂದೆ ನಡೆಯುವ ಮಹಾ ಮಹಾ ಅದ್ಭುತಗಳನ್ನು ನೋಡಿ ತುಂಬಾ ಆನಂದಪಡುವ ಸಂದರ್ಭವು ನಿನಗಿದೆ. ಏಕೆಂದರೆ ನಿನ್ನಂಥವನು ನನ್ನ ಕಣ್ಣಿಗೆ ಬಿದ್ದ ಮೇಲೆ ಉಪ ಯೋಗಿಸಿಕೊಳ್ಳದೆ ಬಿಡುವೆನೆಂದುಕೊಂಡೆಯಾ ? " ಎಂದನು.

" ಗಜಿಬಿಜಿ ಇರಲಿ, ಬಿಡಲಿ, ನನಗೇನು ಬೇಕಾಗಿದೆ ? ನನ್ನನ್ನು ಇಷ್ಟಪ್ರಕಾರ ಹಿಡಿಯಲೂ ಬಿಡಲೂ ಆಟದ ಕಾಯಿ ಎಂದುಕೊಂಡಿರಾ ? ಮನೆ ಬಿಟ್ಟ ಮೇಲೆ ಇಲ್ಲಿಯ ವರೆಗೆ ನಡೆದ ಅದ್ಭುತಗಳನ್ನು ನೋಡಿ ನೋಡಿ ಸಾಕಾಯಿತು. ಇನ್ನು ಬೇಗನೇ ನನ್ನ ಹಳ್ಳಿಗೆ ಹೋಗಿ ಬೇಸಾಯದ ಬದುಕೇ ಬದುಕುವುದು ಸಾಕೆನಿಸುತ್ತದೆ." ಎಂದು ಕಾಳೀವರ್ಮನು ಕೊಡಲಿ ಯನ್ನು ಕಟುಕನ ಕಡೆಗೆ ಒಗೆದು, ಕುದುರೆಯನ್ನು ಹೊರಡಿಸಿದನು.

ಕುದುರೆ ಸ್ವಲ್ಪ ಮಾತ್ರ ಮುಂದೆ ಹೋಗಿರ ಬಹುದು. ಕರಡಿಕೆಂಗಣ್ಣನು ಗಟ್ಟಿಯಾಗಿ ಅವನನ್ನು ಕುರಿತು, " ನಿಲ್ಲು! ಕಾಳೀವರ್ಮ! ಮುಂದೆ ನೋಡು! ನಿನ್ನ ಇದಿರಾಗಿ ಬರುವವರು ಯಾರೆಂಬುದನ್ನು ಗಮನಿಸಿದೆಯಾ ? " ಎಂದನು.

ಈ ಎಚ್ಚರಿಕೆಯನ್ನು ಕೇಳಿ ಕಾಳೀವರ್ಮನು ಮುಂದೆ ನೋಡಿದನು. ದಪ್ಪವಾದೊಂದು ಶಿರೀಷ ವೃಕ್ಷದ ಹಿಂದಿನಿಂದ ಮೂವರು ಅಶ್ವಿಕರು ವೇಗ ವಾಗಿ ಬರುತ್ತಿದ್ದರು. ಅವರಲ್ಲಿ ಮಧ್ಯದಲ್ಲಿರುವವನು ಪಟ್ಟೆಬಟ್ಟೆಗಳ ಪೋಷಾಕು ಧರಿಸಿದ್ದನು. ತಲೆಯಲ್ಲಿ ದೊಡ್ಡ ಅಧಿಕಾರೀ ರುಮಾಲಿದ್ದಿತು. ಉಳಿದಿಬ್ಬರು ಕವಚಧಾರಿಗಳು. ಅವರ ಕೈಗಳಲ್ಲಿ ಕತ್ತಿಗಳೂ, ತೋಳುಗಳಲ್ಲಿ ಢಾಲುಗಳೂ ಇದ್ದುವು.

ಅವರನ್ನು ನೋಡಿದ ಕೂಡಲೇ ಕಾಳೀವರ್ಮನು ಕುದುರೆಯನ್ನು ನಿಲ್ಲಿಸಿ, ಅವರನ್ನೇ ದುರುಗುಟ್ಟಿ ನೋಡತೊಡಗಿದನು. ಹಾಗೆ ಬರುವವರಲ್ಲಿ ಪಟ್ಟೇ



ಪೋಷಾಕಿನವನು, ಕಾಳೀವರ್ಮನ ಕಡೆಗೆ ಬೆರಳು ತೋರಿಸಿ, ಪ್ರಧಾನ ಕಟುಕನನ್ನು ನೋಡಿ, " ಎಲೋ ಕಟುಕನಾಯಕಾ, ಇವನ ಮರಣಶಿಕ್ಷೆ ಇನ್ನೂ ನೆರ ವೇರಿಸಲಿಲ್ಲವೇ ? ಬೇಗನೇ ಇವನ ಶವವನ್ನು ಕೊಂಡೊಯ್ಯಬೇಕೆಂದು ನಾವು ಬಂದರೆ, ಅವನನ್ನು ಹೀಗೆ ಬಿಟ್ಟಿರುವುದರ ಅರ್ಥವೇನು ? ಏನಾಯಿತು ನಿನಗೆ? ಅರೆ ! ಏನಿದೆಲ್ಲಾ ? " ಎಂದನು ಕೋಪದಿಂದ.

ಕಟುಕನು ಗಡಗಡ ನಡುಗುತ್ತ, ಕೋಣದ ಮೇಲಿ ನಿಂದ ಇಳಿದು, ಏನು ಹೇಳಬೇಕೆಂದು ತಿಳಿಯದೆ ನಾಲಗೆ ತಡವುತ್ತಿರಲು, ಕರಡಿಕೆಂಗಣ್ಣನು ಆ ಮೂವರು ಹೊಸ ಅಶ್ವಿಕರ ಬದಿಗೆ ತಿರುಗಿ, ಪಟ್ಟೆ ಪೋಷಾಕಿನವನನ್ನು ಕುರಿತು, " ಸ್ವಲ್ಪ ಶಾಂತನಾಗು. ದೊಡ್ಡ ಮನುಷ್ಯನಂತಿರುವೆ ! ನೀನು ಜಿತಕೇತು ಮಹಾರಾಜರ ಪ್ರಧಾನಾಮಾತ್ಯ ತಾನೇ ? ಜೀವಗುಪ್ತ ನೆಂಬುದು ನಿನ್ನ ಹೆಸರು ಹೌದಾ ? ನನ್ನ ಮಾತು ನಿಜತಾನೇ ? " ಎಂದನು.



ರಾಜನ ಮೇಲೆ ಒಂದಿಷ್ಟೂ ಗೌರವಭಾವವಿಲ್ಲದೆ, ತನ್ನನು ಕೂಡ ಹೀನಭಾವದಿಂದ ನೋಡಿ ಪ್ರಶ್ನಿಸುವ, ಈ ವಿಕಾರರೂಪದವನು, ಯಾವನೋ ಕಪಟಿ ಬೈರಾಗಿಯಾಗಿರಬೇಕೆಂದೆಣಿಸಿ ಜೀವಗುಪ್ತನು ಕೋಪದಿಂದ ಕಣ್ಣು ಕಿರುಗಿಸುತ್ತ, "ಯಾವನಿವನು ಹಾಳು ಬೈರಾಗಿ ? ಬುದ್ಧಿ ಬೇರೆ ಕೆಟ್ಟ ಹಾಗಿದೆ ! ಛಿ ! ಛಿ ! ತಮಾಷೆ ನೋಡುತ್ತ ಬೊಂಬೆಗಳ ಹಾಗೆ ನಿಂತಿರುವಿರಲ್ಲಾ ! ಮೊದಲು ಇವನನ್ನು ಇಲ್ಲಿಂದ ಒದ್ದೋಡಿಸಿರಿ !" ಎಂದನು ಅಧಿಕಾರವಾಣಿಯಿಂದ.

ಅದನ್ನು ಕೇಳಿ ಅವನೊಂದಿಗೆ ಬಂದ ಇಬ್ಬರು ಆಶ್ವಿಕರು, ಕತ್ತಿಗೆ ಕೈಹಾಕಿ, ಹಾಗೆಯೇ ತಟಸ್ಥರಾದರು. ಕೆಂಗಣ್ಣನ ನಗುವೂ, ಅವನ ಕೈಯಲ್ಲಿದ್ದ ಮಂತ್ರದಂಡವೂ ಅವರನ್ನು ಬೆರಗುಪಡಿಸಿತ್ತು. ಅವರ ಕುದುರೆಗಳು ಕೂಡಾ ಹೆದರಿ ಹೇಂಕರಿಸುತ್ತ ಓಡುವ ತವಕದಲ್ಲಿ ನಾಲ್ಕಡಿ ಹಿಂದಿಟ್ಟುವು. ಏನಾಯಿತೆಂಬುದು ಅರ್ಥವಾಗದ ಜೀವಗುಪ್ತನು ಆಶ್ಚರ್ಯದಿಂದ ತನ ಅಂಗರಕ್ಷಕರನ್ನು ದುರುಗುಟ್ಟಿ ನೋಡಿ, "ಏನಾಯಿತು ? ಹುಲಿಯನ್ನು ನೋಡಿದವರ ಹಾಗೆ ಮರಗಟ್ಟಿ ಹೋಗಿರುವಿರಲ್ಲಾ ?" ಎಂದು ಕೇಳಿದನು.

"ಅಯ್ಯಾ, ಹುಲಿಯಲ್ಲ. ಆ ಬೈರಾಗಿಯ ಕೈಯಲ್ಲಿರುವ ದಂಡದ ಹಿಡಿಗೆ ಬಿಗಿದಿರುವ ಕರಡಿಯ ತಲೆಯನ್ನು ನೋಡಿರಿ ! ಅದು ಮುಚ್ಚಿದ ಬಾಯಿಯನ್ನು ತೆರೆದು ಕೋರೆ ಹಲ್ಲುಗಳನ್ನು ತೋರಿಸಿತು ! ಕಣ್ಣುಗಳಿಂದ ಬೆಂಕಿಯ ಕಿಡಿಗಳು ಹಾರಿದುವು ! ಅವನ ಮೇಲೆ ನಾವು ದುಡುಕಿಬಿಟ್ಟರೆ ಒಂದಕ್ಕೊಂದು ಆದೀತೇನೋ !" ಎಂದರು ಆಶ್ವಿಕರು.

ಜೀವಗುಪ್ತನು ಕರಡಿಕೆಂಗಣ್ಣನ ದಂಡವನ್ನು ನೋಡಿ, "ಏನೋ ಬೈರಾಗೀ, ನಿನ್ನ ಮಾತು, ರೀತಿ, ಚೇಷ್ಟೆಗಳನ್ನು ನೋಡುವಾಗ, ತುಂಬ ಗರ್ವಿಷ್ಠನಂತೆ ಕಾಣುವೆ. ಏನಾದರೂ ಮೋಡೀಮಾಯೆ ಕಲಿತಿರುವೆಯೋ ? ನೀನು ಇಲ್ಲಿಗೆ ಬಂದ ಉದ್ದೇಶವಾದರೂ ಏನದು ?" ಎಂದು ಕೇಳಿದನು.

ಕರಡಿಕೆಂಗಣ್ಣನು ಜೀವಗುಪ್ತನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ—"ಓತೀಕಾಟವು ಬಲಿತು ಊಸರವಳ್ಳಿಯಾಗುತ್ತಂತೆ. ಸನ್ಯಾಸಿ ಬೆಳೆದು ಬೈರಾಗಿಯಾಗುತ್ತಾನಂತೆ. ಯಾರಿಗೆ ಬೇಕು ಅಂಥಾ ಗತಿ ? ನಾನು ಸನ್ಯಾಸಿಯೂ ಅಲ್ಲ, ಬೈರಾಗಿಯೂ ಅಲ್ಲ. ಮಹಾಮಾಂತ್ರಿಕ ಕರಡೀಕೆಂಗಣ್ಣ ! ಜೈ ಆದಿಭಲ್ಲೂಕಗುರುಪಾದಾ ! ನೋಡಿರಿ, ನಾನು ಎಂಥವನೆಂದು !" ಎಂದು ಕೂಗಿ ಹೇಳಿ, ಮಂತ್ರದಂಡದಿಂದ ಬದಿಯಲ್ಲಿದ್ದ ಬಂದು ಒಣಮರದ ಕಾಂಡವನ್ನು ಗಟ್ಟಿಯಾಗಿ ಹೊಡೆದನು.

ಆ ಹೊಡೆತಕ್ಕೆ ಮರದ ಕಾಂಡದೊಳಗಿನಿಂದ ಛಟ್‌ಫಟ್ ಧ್ವನಿಯಿಂದ ಬೆಂಕಿಯ ಕಿಡಿಗಳೆದ್ದು ನೋಡ ನೋಡುತ್ತಿದ್ದಂತೆ ಇಡಿಯ ಮರವೇ ಸುಟ್ಟು ಹೋಗತೊಡಗಿತು. ಮಂತ್ರಿ ಜೀವಗುಪ್ತನ ಕುದುರೆ

ಹಿಂದಿನ ಕಾಲುಗಳಲ್ಲಿ ನಿಂತು ಕುಣಿಯುತ್ತ ಬಹು ದೂರ ಓಡಿತು. ಅವನ ಅಂಗರಕ್ಷಕರಿಬ್ಬರು ಭಯ ಕಂಪಿತರಾಗಿ ತಮ್ಮ ಕುದುರೆಗಳನ್ನು ಮಂತ್ರಿಯ ಹಿಂದೆಯೇ ಓಡಿಸಿದರು.

ಒಂದೆರಡು ನಿಮಿಷಗಳವರೆಗೆ ಯೂರ ಬಾಯಿ ಯಲ್ಲಿಯೂ ಮಾತು ಹೊರಡಲಿಲ್ಲ. ತುಸುದೂರ ದಲ್ಲಿದ್ದು ಇದನೆಲ್ಲಾ ಗಮನಿಸಿಕೊಂಡಿದ್ದ ಕಾಳೀ ವರ್ಮನು ತನ್ನ ಕುದುರೆಯನು ಕರಡಿಕೆಂಗಣ್ಣನ ಹತ್ತಿರ ನಡೆಯಿಸಿ, ಕುದುರೆಯಿಂದಿಳಿದು. "ಆಹ! ನೀವು ಸಾಧಾರಣ ಮೋಡಿಮಾಯೆಯ ಇಂದ್ರ ಜಾಲಕರಲ್ಲ. ಮಹಾಮಂತ್ರವೇತ್ತರೇ ನಿಜ. ಕಪ ಟಿಯೂ ದುಷ್ಟನೂ ಬುದ್ಧಿಗೇಡಿಯೂ ಆದ ಈ ಮಂತ್ರಿಯನ್ನು ಹೆದರಿಸಿದ ಹಾಗೆಯೇ ಇವನ ರಾಜ ಜಿತಕೇತುವನ್ನೂ ಹೆದರಿಸಿ, ಬುದ್ಧಿ ತಂದುಕೊಂಡು ರಾಜ್ಯವಾಳುವಂತೆ ಮಾಡಿಸಲು ನಿಮಗೆ ಉಪಾಯವಿದೆ. ನಿಮ್ಮ ಅಪಾರ ಶಕ್ತಿಯನ್ನು ಒಳ್ಳೆಯ ಕಾರ್ಯಕ್ಕೆ ಏಕೆ ಪ್ರಯತ್ನಿಸಬಾರದು? ಈಗ ಈ ಒಣಮರ ವನ್ನು ಸುಟ್ಟುಹಾಕಿ ಏನು ಪ್ರಯೋಜನ?" ಎಂದು ಕೇಳಿದನು.

"ಭಳಿರೇ! ನೀನು ಧೈರ್ಯಶಾಲಿ ಮಾತ್ರವಲ್ಲ, ಬುದ್ಧಿಶಾಲಿ ಕೂಡಾ. ಈ ಮರವನ್ನು ಸುಟ್ಟು ಹಾಕಿದ್ದರಿಂದ ತಾನೇ ನಿನಗೆ ನನ್ನ ಶಕ್ತಿ ಗೊತ್ತಾ ಯಿತು? ಯುವಕಾ, ನೀನು ನನ್ನ ಮನಸ್ಸಿನಲ್ಲಿರುವು ದನ್ನೇ ಕಂಡುಹಿಡಿದು ಹೇಳಿದ ಹಾಗಿದೆ" ಎಂದು ಕರಡಿಕೆಂಗಣ್ಣನು ಕಾಳೀವರ್ಮನನ್ನು ಮೆಚ್ಚಿ, ಮಂತ್ರಿ ಜೀವಗುಪ್ತನೊಂದಿಗೆ–"ಎಲೈ ಮಂತ್ರಿಯೇ, ನನ್ನ ಶಕ್ತಿ ಎಂತಹುದೆಂದು ಗೊತ್ತಾಯಿತಷ್ಟೆ? ಈಗ ಹೇಳು. ಇಲ್ಲಿ ಆಜ್ಞೆಮಾಡ ಬೇಕಾದವನು ನೀನೋ ನಾನೋ?" ಎಂದು ಕೇಳಿದನು.

ಜೀವಗುಪ್ತನು ಸುಡುತ್ತಿರುವ ಮರವನ್ನು ನೋಡುತ್ತ, ತಾನು ಯಾವುದೋ ದೊಡ್ಡ ಪ್ರಾಣಾ



ಪಾಯದಲ್ಲಿ ಸಿಕ್ಕಿಕೊಂಡಿರುವೆನೆಂದು ಅಂಜುತ್ತ, ನಡು ಗುವ ಕಂಠದಲ್ಲಿ, "ಅಯ್ಯಾ, ಮಾಂತ್ರಿಕಮಹಾತ್ಮ! ನಿಮ್ಮ ಅಮೋಘವಾದ ಶಕ್ತಿಯನ್ನು ಕಣ್ಣಾರೆ ಕಂಡು ದಿಗ್ಭ್ರಮಿಸಿದ್ದೇನೆ. ನಿಮ್ಮಂಥವರು ಋಷಿಗಳಿಗೆ ಸಮಾನರು. ಇಲ್ಲಿ ಮಾತ್ರವಲ್ಲ, ರಾಜನ ಮನೆಗೂ ಚಿತ್ತೈಸಿ ಜಿತಕೇತು ಮಹಾರಾಜರಿಗೂ ನೀವು ಆಜ್ಞೆ ಗಳನ್ನೂ ಆಲೋಚನೆಗಳನ್ನೂ ಕೊಡಬಹುದು. ನಿಮ್ಮ ಅಮೂಲ್ಯ ಆಲೋಚನೆಗಳನ್ನು ಮಹಾರಾಜರು ಮಾನ್ಯಮಾಡುತ್ತಾರೆ. ದಯ ಮಾಡಬೇಕು" ಎಂದನು.

"ಎಂತಹ ಮಹಾಮಂತ್ರಿಗೆ ಎಂತಹ ದುರ್ಗತಿ ಬಂತು!" ಎಂದು ಹೇಳಿಕೊಳ್ಳುತ್ತ, ಕಾಳೀವರ್ಮನು ಸುತ್ತಲಿರುವ ಅಶ್ವಿಕರ ಕಡೆಗೂ ಕಟುಕನಾಯಕನ ಕಡೆಗೂ ನೋಡಿದನು.

ಎಲ್ಲರೂ ಕರಡಿಕೆಂಗಣ್ಣನ ದಾಸಾನುದಾಸರಂತೆ ನಿಂತಿದ್ದಾರೆ. ಮಾಂತ್ರಿಕ ಕರಡಿಕೆಂಗಣ್ಣನು ತನ್ನ ದಂಡ

ವನ್ನು ಎತ್ತಿ ಹಿಡಿದು, "ನನ್ನ ಆಜ್ಞೆ ಏನೆಂಬುದನ್ನು ಎಲ್ಲರೂ ಕೇಳಿರಿ!" ಎಂದು ಕೂಗಿ ಕಟುಕನಾಯಕನೊಂದಿಗೆ, "ಎಲೋ ಕಟುಕನಾಯಕಾ, ತಲೆಗಳನ್ನು ಕಡಿದುರುಳಿಸಬಲ್ಲವನಾದ ನಿನಗೆ ಕಡಿದ ತಲೆಗಳನ್ನು ಮತ್ತೆ ಶರೀರಕ್ಕೆ ಅಂಟಿಸಿ ಹೊಲಿಯಲಿಕ್ಕೂ ಗೊತ್ತಿರಬೇಕು. ಗೊತ್ತಿದೆಯಷ್ಟೆ? ಈಗ ಸತ್ತುಬಿದ್ದಿರುವ ಆ ಮುಂಡಕ್ಕೆ ಅದರ ತಲೆಯನ್ನಿಟ್ಟು ಹೊಲಿದು. ಅದನ್ನು ಕುದುರೆಯ ಮೇಲೆ ಕೂಡಿಸಿಟ್ಟು, ಅದು ಬೀಳದಂತೆ ಹಗ್ಗದಿಂದ ಕಟ್ಟು. ಬೇಗ ಆಗಲಿ ಈ ಕೆಲಸ" ಎಂದನು.

ಕಟುಕನು ಕೂಡಲೇ ಅವನು ಹೇಳಿದ ಹಾಗೆಯೇ ಎಲ್ಲವನ್ನೂ ಮಾಡಿದನು. ಆದರೆ ಭೀತಿಯ ನಡುಕದ ಗಡಿಬಿಡಿಯಲ್ಲಿ ಅವನು ಮುಖವನ್ನು ಬೆನ್ನಿನ ಕಡೆಗಿಟ್ಟು ಹೊಲಿದು ಕುದುರೆಯ ಮೇಲೆ ಕೂಡಿಸಿದ್ದನು. ಕುದುರೆಯ ಮೇಲೆ ಹಿಮ್ಮೊಗದ ಕಳೇಬರವು ಸವಾರಿ ಮಾಡುವಂತಾಯಿತು.

ಈ ತಪ್ಪನ್ನು ನೋಡಿ ಕರಡಿಕೆಂಗಣ್ಣನೂ, ಜೀವಗುಪ್ತನೂ ಹೊರತು ಉಳಿದೆಲ್ಲರೂ ಗಹಗಹಿಸಿ ನಕ್ಕರು. ಕರಡಿಕೆಂಗಣ್ಣನು ಜೀವಗುಪ್ತನನ್ನು ನೋಡಿ, "ಎಲೋ ಮಂತ್ರೀ, ನೀನು ಕಟುಕನಾಯಕನ ವಾಹನದ ಮೇಲೆ ಏರಿ. ನಿನ್ನ ವಾಹನವನ್ನು ಕಟುಕನಾಯಕನಿಗೆ ಕೊಡು" ಎಂದು ಅಪ್ಪಣೆ ಮಾಡಿದನು.

ಜೀವಗುಪ್ತನು ಮರುಮಾತಾಡದೆ. ಕಂಪಿಸುತ್ತ ಹೋಗಿ ಕೋಣದ ಮೇಲೆ ಏರಿ ಕುಳಿತನು. ಹಾಗೆಯೇ ಕಟುಕನು ಮಂತ್ರಿಯ ಕುದುರೆಯ ಮೇಲೇರಿ ಕಡಿವಾಣ ಹಿಡಿದುಕೊಂಡನು. "ಹುಂ, ಇನ್ನು ಎಲ್ಲರೂ ನಗರಕ್ಕೆ ನಡೆಯಿರಿ" ಎಂದು ಕರಡಿಕೆಂಗಣ್ಣ ಆಜ್ಞೆಮಾಡಿದನು.

ಜಿತಕೇತು ರಾಜನ ಮಂತ್ರಿಗೆ ಆದ ಅವಮಾನವನ್ನು ನೋಡಿ ಕಾಳೀವರ್ಮನು ಸಂತೋಷಿಸುತ್ತ, "ಈ ಮೆರವಣಿಗೆಯನ್ನು ನೋಡಿ ನಗರದ ಪ್ರಜೆಗಳು ತುಂಬಾ ವಿನೋದಿಸುತ್ತಾರೆ. ಇನ್ನು ನನ್ನ ದಾರಿಹಿಡಿದು ನಾನು ಹೋಗಿ ಬಿಡುತ್ತೇನೆ" ಎನ್ನುತ್ತ ತನ್ನ ಕುದುರೆಯನ್ನು ಹೊರಡಿಸಲು ನೋಡಿದನು. ಆಗ ಕರಡೀಕೆಂಗಣ್ಣನು ತನ್ನ ದಂಡವನ್ನು ಮೇಲೆತ್ತಿ, "ಕಾಳೀವರ್ಮಾ! ನನ್ನ ಆಜ್ಞೆ ನಿನಗೆ ಕೇಳಿಸಿಲ್ಲವೇನು? ಅತ್ತೆತ್ತ ಹೊರಡುವೆ? ನೀನೂ ನಮ್ಮೊಂದಿಗೇ ಇರತಕ್ಕದ್ದು. ನನ್ನ ಆಜ್ಞೆಗೆ ನೀನೂ ಕಟ್ಟುಪಟ್ಟವನೇ. ನಡೆ ಹೀಗೆ!" ಎಂದನು.

"ಆಜ್ಞೆಯೆ? ನನ್ನನ್ನು ಇಲ್ಲಿ ಆಜ್ಞಾಪಿಸುವ ಸಮರ್ಥನು ಯಾರವನು? ಬರಲಿ ಮುಂದೆ ನೋಡೋಣ!" ಎನ್ನುತ್ತ ಕಾಳೀವರ್ಮ ಒರೆಯಿಂದ ಕತ್ತಿಯನ್ನು ಹಿರಿದನು.

(ಇನ್ನೂ ಇದೆ)





# ವೀರಹನುಮಾನ್

ಶ್ರೀರಾಮನ ಕಾಲದಿಂದ ಕೃಷ್ಣನ ಕಾಲದವರೆಗೆ ಮೆರೆದ ಹನುಮಂತನು ಗಂಧಮಾದನ ಪರ್ವತದ ಮೇಲೆ ಕುಳಿತು ರಾಮನಾಮವನ್ನೇ ಶ್ವಾಸೋಚ್ಛ್ವಾಸವಾಗಿ, ತದೇಕ ಧ್ಯಾನದಿಂದ ತಪಸ್ಸಿನಲ್ಲಿರಲು, ಬ್ರಹನು ಅವನ ಬಳಿಗೆ ಬಂದನು.

"ನನ್ನ ಪ್ರಿಯನಾದ ಹನುಮಾನ್, ಏಳು, ಕಲಿಯುಗವು ಪ್ರಾರಂಭವಾಗಲಿಕ್ಕಾಯಿತು. ಕಲಿಯುಗವು ನಿನಗೆ ಸರಿಹೊಂದುವಂತಹುದಲ್ಲ. ಕಲಿಯುಗದ ಕಳಂಕಗಳಿಗೆಲ್ಲಾ ಅತೀತವಾಗಿರುವ ಕ್ಷೀರಸಾಗರಕ್ಕೆ ಹೋಗಿ ಮಹಾ ವಿಷ್ಣುವಿನ ಬಳಿಯಲ್ಲಿರು. ಅವನೇ ನಿನ್ನನ್ನು ಕರೆಸಿಕೊಳ್ಳುತ್ತಾನೆ." ಎಂದು ಅಪ್ಪಣೆ ಕೊಟ್ಟು ಹೊರಟುಹೋದನು.

ಕ್ಷೀರಸಾಗರದಲ್ಲಿ ಶೇಷಪರ್ಯಂಕದ ಮೇಲೆ ಪವಡಿಸಿಕೊಂಡಿದ್ದ ವಿಷ್ಣುವಿನ ಬಳಿಯಲ್ಲಿ ತುಂಬುರು ನಾರದರು ಸದಾ ಕೀರ್ತನೆ ಸಂಗೀತವನ್ನು ನಡೆಯಿಸಿಕೊಂಡಿದ್ದರು. ನಾರದನು ತನ್ನ ಮಹತೀ ವೀಣೆಯನ್ನು ಮಿಾಂಟುತ್ತ ತುಂಬಾ ಭಕ್ತಿ ಭಾವಗಳು ತುಳುಕುವ ಕೀರ್ತನೆಗಳನ್ನು ಹಾಡುತ್ತಿದ್ದನು. ತುಂಬುರು ಹಯಗ್ರೀವ ವೀಣೆಯ ಮೇಲೆ ಮೃದಂಗದ ಧ್ವನಿಗಳನ್ನು ಹೊರಡಿಸುತ್ತ ಕಟ್ಟುದಿಟ್ಟವಾದ ಶಾಸ್ತ್ರೀಯ ಗಾನವನ್ನು ತಾಳ ಪ್ರಧಾನವಾಗಿ ಹಾಡಿಕೊಂಡಿದ್ದನು. ಒಬ್ಬರಾದ ಮೇಲೆ ಇನ್ನೊಬ್ಬರಂತೆ ಹಾಡಿಕೊಂಡಿದ್ದ ಅವರಲ್ಲಿ ಒಂದು ಬಗೆಯ ಸ್ಪರ್ಧೆ ತನ್ನಂತಾನೇ ಹೊರಟಿತ್ತು. ಬರುಬರುತ್ತ ತಾನೇ ಹೆಚ್ಚಿನ ಸಂಗೀತವೇತ್ತನೆಂಬ ಗರ್ವವೂ, ದ್ವೇಷಾಸೂಯೆಗಳೂ ಇಬ್ಬರಲ್ಲಿಯೂ ಹೆಚ್ಚು ಹೆಚ್ಚಾಗಿ ಉಕ್ಕುತ್ತಿದ್ದಿತು.

ಕಡೆಗೆ ಇಬ್ಬರೂ ತಮ್ಮೊಳಗೆ ಬಹಿರಂಗವಾಗಿಯೇ ಸ್ಪರ್ಧಿಸಿದರು. ಇಬ್ಬರೂ ಸಣ್ಣ ಪುಟ್ಟ ಛೀತ್ಕಾರಗಳಿಗೆ ಪ್ರಾರಂಭಿಸಿ, ಅದೇ ದೊಡ್ಡದಾಗುತ್ತ ತಮ್ಮ ತಮ್ಮ ವೀಣೆಗಳನ್ನು ಗದಾಯುಧದಂತೆ ಎತ್ತಿ ಹೊಡೆದಾಡಲೂ ತೊಡಗಿದರು. ಅದರಿಂದೇನೂ ಬಗೆಹರಿಯದೆ "ನಮ್ಮೊಳಗೆ ಯಾರ ಸಂಗೀತ ದೊಡ್ಡದು? ನೀವೇ ತೀರ್ಪು ಹೇಳಬೇಕು" ಎಂದು ಮಹಾ

೪೮. ಭವಿಷ್ಯದ್ ಬ್ರಹ್ಮ



ವಿಷ್ಣುವನ್ನೇ ಒತ್ತಾಯಿಸತೊಡಗಿದರು. ವಿಷ್ಣು ಅವರನ್ನು ಸಮಜಾಯಿಸಲು ಸಾಧ್ಯವಾಗದೆ ಯೋಗ ನಿದ್ರೆಗೆ ಜಾರಿಕೊಂಡರೂ ಅವರು ಬಿಡದೆ ವಿಷ್ಣುವಿನ ಒಂದೊಂದು ಕಿವಿಯ ಹತ್ತಿರ ಬಾಯಿಯಿಟ್ಟು, "ನಮ್ಮಿಬ್ಬರಲ್ಲಿ ಯಾರು ಹೆಚ್ಚಿನವನೆಂದು ಹೇಳುವಿರೋ ಇಲ್ಲವೊ? ಹೇಳುವವರೆಗೂ ನಾವು ಬಿಡಲಾರೆವು. ನಮ್ಮ ತಗಾದೆಯನ್ನು ನೀವಲ್ಲದೆ ಬೇರೆ ಯಾರು ತೀರಿಸುವರು?" ಎಂದರು.

ವಿಷ್ಣು ಬೇಸರದಿಂದ, "ನಿಮ್ಮ ಪೂರ್ತಿ ಸಂಗೀತ ಸಾಮರ್ಥ್ಯವನ್ನು ನಾನೆಲ್ಲಿ ಕೇಳಿದ್ದೇನೆ? ನಿಮ್ಮ ಸಂಗೀತದ ಆನಂದದಲ್ಲಿ ನಾನು ಮೈಮರೆತು ಯೋಗ ನಿದ್ರೆಯಲ್ಲಿ ಬೀಳುತ್ತಾ ಏಳುತ್ತಾ ಇರುವವನು. ಆದುದರಿಂದ ನಾನು ಹೇಳುವ ತೀರ್ಪು ಸರಿಯಾಗಲಾರದು. ಒಂದು ಕೆಲಸ ಮಾಡಿರಿ. ಗಂಧಮಾದನ ಪರ್ವತದ ಮೇಲೆ ಒಂದು ಕೋತಿ ಇದೆ. ರಾಮನು ಕರೆಯುವನೆಂದು ಹೇಳಿದರೆ, ಹಾಗೆ ಹೇಳಿದವರ ಹಿಂದೆಯೇ ಹೊರಟುಬಿಡುತ್ತದೆ. ಆ ಕೋತಿಯನ್ನು ಇಲ್ಲಿಗೆ ಕರೆದುಕೊಂಡು ಬನಿ. ಅವನು ನಿಮ್ಮ ಹೆಚ್ಚು ಕಡಮೆಗಳನ್ನು ಸರಿಯಾಗಿ ಗುರುತಿಸಿ ಹೇಳಬಲ್ಲನು." ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟನು.

ವಿಷ್ಣುವಿನ ಮಾತು ಕೇಳಿ ತುಂಬುರು ನಾರದರು ಬೇಸರದಿಂದ, ಒಬ್ಬರನ್ನೊಬ್ಬರು ಚುರುಚುರು ನೋಡಿಕೊಂಡು, ಗಂಧಮಾದನ ಪರ್ವತ ಪ್ರಾಂತಕ್ಕೆ ಹೊರಟರು. ಅವರು ಗಂಧಮಾದನ ಪರ್ವತವನ್ನು ಸೇರಿದಾಗ, ಹನುಮಂತನ ಕಂಠದೊಳಗಿನಿಂದ ಏಕಧಾರೆಯಾಗಿ ಹೊರಡುವ ರಾಮನಾಮದ ಧಾರಾವಾಹಿ ಜಪವು ಓಂಕಾರನಾದವಾಗಿ ಕೇಳಿಬರತೊಡಗಿತು. ತುಂಬುರು ನಾರದರು ಪರ್ವತದ ಮೇಲೆ ಹೋಗಿ ಹನುಮಂತನ ಸಮೀಪದಲ್ಲಿ ನಿಂತುಕೊಂಡರು. ಹನುಮಂತನು ಕಣ್ಣು ಮುಚ್ಚಿ ರಾಮನಾಮದ ಸ್ಥಾಯಿಯನ್ನು ಹೆಚ್ಚಿಸುತ್ತ, ತಗ್ಗಿಸುತ್ತ ಸ್ವರಯುಕ್ತವಾಗಿ ಗಾನ ಮಾಡುತ್ತಿರುವಂತೆ, ಕೇಳುವವರ ಹೃದಯದಲ್ಲಿ ಅನೇಕ ಭಾವಗಳನ್ನು ಎಬ್ಬಿಸುವಂತಿದ್ದಿತು.

ರಾ, ಮ ಎಂಬ ಎರಡೇ ಅಕ್ಷರಗಳು ಅನೇಕ ತಾಳ ಗತಿಗಳೊಂದಿಗೆ ಲಯವಿನ್ಯಾಸ ಮಾಡುವುದನ್ನು ನೋಡಿ ತುಂಬುರು ನಾರದರು ಬೆರಗಾಗಿ ಬಂದ ಕಾರ್ಯವನ್ನೇ ಮರೆತರು. ಹನುಮಂತನು ದೊಡ್ಡ ನಾದೋಪಾಸಕನೆಂದು ಅವರಿಗೆ ಗೊತ್ತಾಯಿತು. ಸಾಹಿತ್ಯಕ್ಕಿಂತ, ಶಾಸ್ತ್ರಕ್ಕಿಂತ, ಗಾತ್ರ ಮಾಧುರ್ಯವು ಎಷ್ಟು ದೊಡ್ಡದೆಂದು ಆಶ್ಚರ್ಯಪಡುತ್ತಿದ್ದರು. ಅವರಿಗೇ ತಿಳಿಯದಂತೆ ಅವರ ಬಾಯಿಗಳಿಂದಲೂ ರಾಮನಾಮವು ಹೊರಟು ಹನುಮಂತನ ಸ್ವರದೊಂದಿಗೆ ಸೇರಲು ಪ್ರಯತ್ನಿಸುತ್ತಿದ್ದಿತು. ಹನುಮಂತನ ಗಂಭೀರ ಮಂದ್ರಗಾತ್ರದೊಂದಿಗೆ ಅವರ ಕಂಠಸ್ವರವು ಕೂಡದೆ ಅಪಶ್ರುತಿಯುಂಟಾಗಲು, ಇದೇನಾಯಿತೆಂದು ಹನುಮಂತನು ಕಣ್ಣು ತೆರೆದನು.

ತನ್ನ ಇದಿರಿನಲ್ಲಿ ಕಣ್ಣು ಮುಚ್ಚಿ ರಾಮನಾಮ ಜಪಿಸುವ ದೇವಗಾಯಕರಾದ ತುಂಬುರು ನಾರದರನ್ನು ನೋಡಿ ಆಶ್ಚರ್ಯವೇಳಲು, ಧಿಗ್ಗನೆದ್ದು ಅವರ ಪಾದಗಳನ್ನು ಹಿಡಿದು ನಮಸ್ಕರಿಸಿ ಕಣ್ಣಿಗೊತ್ತಿಕೊಂಡನು ಹನುಮಂತ.

ಆಗಲೇ ತುಂಬುರು ನಾರದರು ಎಚ್ಚರಕ್ಕೆ ಬಂದು ತಮ್ಮ ಕಾಲುಗಳನ್ನು ಹಿಂದಕ್ಕೆ ಎಳೆದುಕೊಂಡು, "ಮಹಾ ಮಹಿಮನೇ! ನಮ್ಮ ಕಾಲುಗಳನ್ನು ನೀನು ಹಿಡಿಯುವುದೆಂದರೇನು? ನಮ್ಮನ್ನು ಯಾರೆಂದು ಭಾವಿಸಿದೆಯೋ? ನಾವು ಸಾಮಾನ್ಯ ತುಂಬುರು ನಾರದರು!" ಎಂದರು.

"ನೀವು ಯಾರೇ ಆಗಿದ್ದರೂ ರಾಮನಾಮ ಸ್ಮರಣೆ ಮಾಡುವವರೆಲ್ಲಾ ನನಗೆ ಆರಾಧ್ಯರೇ. ಅವರ ಪಾದ ಧೂಳಿಯನ್ನು ನನ್ನ ಶಿರಸ್ಸಿನಲ್ಲಿ ಧರಿಸಿಕೊಂಡರೇನೇ ನನಗೆ ತೃಪ್ತಿ, ಆನಂದ, ಸೌಭಾಗ್ಯ ಎಲ್ಲವೂ! ನಿಜಕ್ಕೂ ಈ ದಿನ ನಿಮ್ಮ ದರ್ಶನದಿಂದ ನಾನು ಧನ್ಯನಾದೆನು." ಎಂದನು ಹನುಮಂತ. ಹನುಮಂತನು ಎಷ್ಟು ದೊಡ್ಡ ಗಾನಕಲಾಕೋವಿದನೋ, ಎಷ್ಟು ದೊಡ್ಡ ರಾಮ ಭಕ್ತನೋ ಎಂಬುದನ್ನು ಅಳೆಯಲು ಸಾಧ್ಯವಾಗದೆ ತುಂಬುರು ನಾರದರು ಆಶ್ಚರ್ಯಪಡುತ್ತ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ತಮ್ಮಿಬ್ಬರ ಹೆಚ್ಚಳಿಕೆಗೆ ಅರ್ಥವಿಲ್ಲವೆಂದು ಈಗ ಅವರಿಗೆ ಹೊಳೆಯ ತೊಡಗಿತು. ಅಂತೆಯೇ ಅವರೊಳಗಿನ ದ್ವೇಷಾಸೂಯೆಗಳೂ ಇಳಿಯತೊಡಗಿದುವು. ಆಗ ಅವರು ತಾವು ಬಂದ ಕೆಲಸವನ್ನು ನೆನಪು ಮಾಡಿಕೊಂಡು, "ರಾಮನು ನಿನ್ನನ್ನು ಕರೆದುಕೊಂಡು ಬರಲು ನಮ್ಮನ್ನು ಕಳುಹಿಸಿದ್ದಾನೆ. ಆತನು ಕ್ಷೀರ ಸಾಗರದಲ್ಲಿ ಶೇಷತಲ್ಪದ ಮೇಲೆ ವಿಶ್ರಾಂತಿಪಡೆಯುತ್ತಿದ್ದಾನೆ" ಎಂದು ತುಂಬುರು ಹೇಳಿದನು.

"ಸೀತಾದೇವಿ ಆತನ ಪಾದಗಳನ್ನು ಒತ್ತಿಕೊಂಡಿದ್ದಾಳೆ. ಲಕ್ಷ್ಮಣನು ಸಾವಿರ ಹೆಡೆಗಳ ಕೊಡೆಯನ್ನು ಹಿಡಿದಿದ್ದಾನೆ. ಭರತ ಶತ್ರುಘ್ನರು ಅವನ ಭುಜಸ್ಕಂಧಗಳನ್ನು ಅಲಂಕರಿಸಿ ಕೊಂಡಿದ್ದಾರೆ" ಎಂದು ನಾರದನು ಹೇಳಿದನು.





"ಹಾಗಾದರೆ ನಡೆಯಿರಿ" ಎಂದು ಹನುಮಂತನು ಕೂಡಲೇ ಹೊರಟನು. ಇದನ್ನು ಮುಂದಾಗಿಯೇ ಸೂಚಿಸಿದ್ದ ಬ್ರಹ್ಮನ ಸಂಕಲ್ಪದಂತೆಯೇ ಇದೆಲ್ಲಾ ನಡೆಯುವುದೆಂದು ಅವನಿಗೆ ಗೊತ್ತಾಯಿತು.

ಹನುಮಂತನು ತುಂಬುರು ನಾರದರೊಂದಿಗೆ ಕ್ಷೀರಸಾಗರವನ್ನು ಸೇರಿದನು. ಗರುತ್ಮಂತನು ಅವನಿಗೆ ಇದಿರಾಗಿ ಬಂದು ಸ್ವಾಗತ ಹೇಳಿ, ಆನಂದದಿಂದ ಹನುಮಂತನ ಹೆಗಲಿನ ಮೇಲೆ ಕೈಗಳನ್ನು ಹಾಕಿ ಯೋಗ ಕ್ಷೇಮ ವಿಚಾರಿಸುತ್ತ, ಅವನನ್ನು ವಿಷ್ಣುವಿನ ಬಳಿಗೆ ಕರೆದೊಯ್ದನು.

ಆಗ ಹನುಮಂತನ ಕಣ್ಣಿಗೆ ವಿಷ್ಣು ರಾಮನಂತೆಯೇ ಕಾಣಿಸಿದನು. ವಿಷ್ಣುವೇ ರಾಮನೆಂದೂ, ರಾಮನೇ ವಿಷ್ಣುವೆಂದೂ, ಹನುಮಂತನು ವಿಷ್ಣುವಿನ ದಶಾವತಾರಗಳನ್ನೂ ನೆನೆಯುತ್ತ, ತಲೆ ಬಾಗಿ ಕೈಜೋಡಿಸಿ ಲಕ್ಷ್ಮೀನಾರಾಯಣರಿಗೆ ವಂದಿಸಿದನು. ವಿಷ್ಣು ಮುಗುಳ್ನಗುತ್ತ, ಹನುಮಂತನನ್ನು ನೋಡಿ, "ಹನುಮಂತಾ! ಇದು ಭೇದಭಾವಗಳಿಗೆ ಎಡೆಯಿಲ್ಲದ ವೈಕುಂಠ. ಇಲ್ಲಿ ತುಂಬುರು ನಾರದರೊಳಗೆ ಒಂದು ಸಂದೇಹವೂ ಸ್ಪರ್ಧೆಯೂ ಉಂಟಾಗಿದೆ. ನಾನಂತೂ ಅವರ ಗಾನ ಮಾಧುರ್ಯದಲ್ಲಿ ತೇಲಾಡಿ ಕೊಂಡಿರುವವನು. ಹೆಚ್ಚು ಕಡಿಮೆಯಾವುದೂ ಹೇಳಲಾಗದವನು. ನೀನು ಅವರ ಪಾಂಡಿತ್ಯವನ್ನು ಪರೀಕ್ಷಿಸಿ ಯಾರದು ಹೆಚ್ಚು ಎಂಬುದನ್ನು ಹೇಳಬೇಕು. ಅದಕ್ಕೇ ನಿನ್ನನ್ನು ಕರೆಯಿಸಿದೆನು. ಅವರನ್ನು ಪರೀಕ್ಷಿಸುವ ಮೊದಲು ನಿನ್ನ ಗಾನ ಹೇಗಿದೆಯೋ ನೋಡಬೇಕೆಂದಿದ್ದೇನೆ. ಮೊದಲು ಸ್ವಲ್ಪ ನೀನೇ ಹಾಡಿಬಿಡು!" ಎಂದನು.

ಹನುಮಂತನು, "ರಾಮರಾಮ! ನಾನು ಸಂಗೀತವೇತ್ತನೇ ಅಲ್ಲವಲ್ಲಾ! ಸರಿಗಮವೆನ್ನಲು ಕೂಡಾ ತಿಳಿಯದ ಕಪಿ! ವಾಯುವಿನ ಮಗ. ನನ್ನದು ಕೇವಲ ಗಾಳೀ ಹಾಡು. ಮಹಾ ಮಹಿಮರ ಮುಂದೆ ಹಾಡುವಂತಹ ಶಕ್ತಿವಂತನು ನಾನಲ್ಲ ಸ್ವಾಮಿ!" ಎಂದನು.

"ಹನುಮಾ! ಇದೇ ನೋಡು ನಿನ್ನ ಹತ್ತಿರ ಬರುವ ತಂಟೆ! ನಿನಗಿರುವ ಶಕ್ತಿ ಏನೆಂಬುದು ನಿನಗೆ ಗೊತ್ತಿಲ್ಲ. ನೀನು ಸೂರ್ಯನ ಹತ್ತಿರ ಎಲ್ಲಾ ಶಾಸ್ತ್ರಗಳನೂ ಸಾಹಿತ್ಯ ಕಲೆಗಳನ್ನೂ, ನವ ವ್ಯಾಕರಣಗಳನೂ ಕಲಿತು ಸಕಲ, ಕಲಾವಲ್ಲಭನಾದವನು. ಯಾರೋ ಒಬ್ಬರು ನಿನ್ನ ಸತ್ವವೇನೆಂಬುದನ್ನು ಎತ್ತಿ ತೋರಿಸಿದ ಹೊರತು ನಿನಗೆ ಆವೇಶ ಬಾರದು. ನಾನು ಹೇಳುತ್ತೇನಷ್ಟೆ? ಇನ್ನು ಹಾಡು, ಹುಂ," ಎಂದನು ವಿಷ್ಣು.

ಆಗ ಹನುಮಂತನು ತನ್ನ ಹೆಸರಿನ ಮೊದಲನೆಯ 'ಹ' ಕಾರದ 'ಹಾ' ಎಂಬ ಧ್ವನಿಯನ್ನು ಮಂದ್ರ ಗಂಭೀರನಾದದಿಂದ ಪ್ರಾರಂಭಿಸಿ ವಿಷ್ಣುವಿಗೆ ಪ್ರಿಯವಾದ ಹಿಂದೋಳರಾಗವನ್ನು ಆಲಾಪನೆಯನ್ನಾಗಿ ಹಿಡಿದನು. ತುಂಬುರು ನಾರದರು ಆ ಸ್ವರದ

ಮಾಧುರ್ಯಕ್ಕೆ, ಗಾತ್ರಗಾಂಭೀರ್ಯಕ್ಕೆ, ಸಂಭ್ರಮಾಶ್ಚರ್ಯಪಡುತ್ತ ಬಾಯಿಯನ್ನು ಅರೆದೆರೆದು, ಕಿವಿನಿಗುರಿಸಿ ಕೇಳುತ್ತಿದ್ದರು.

ಹನುಮಂತನು ಹಿಂದೋಳ ರಾಗವನ್ನು ವೈಜಯಂತಿಗೆ ತಿರುಗಿಸಿ ರಾಮನಾಮವನ್ನೇ ಹಿಡಿದನು. ರಾಮ ಎಂಬ ಎರಡು ಅಕ್ಷರಗಳಿಂದಲೇ ಸ್ಥಾಯೀಭೇದಗಳನ್ನು ತೋರಿಸಿ, ಅನೇಕ ಬಗೆಯ ತಾಳಗತಿಗಳಿಂದ ಅನೇಕ ರಾಗಗಳಿಂದ ಹನುಮಂತನು ಹಾಡುತ್ತಿರುವಾಗ, ಹಾಲಿನ ಸಮುದ್ರದಲ್ಲಿ ತೆರೆಗಳು ಎದ್ದೆದ್ದು ನಾಟ್ಯಕ್ಕೆ ತೊಡಗಿದುವು. ಕೇಳುವವರ ಎದೆಯೊಳಗೆ ನಾದತರಂಗಗಳು ಉಕ್ಕುಕ್ಕಿ ಆನಂದದಲ್ಲಿ ಹೊರಳುತಿದ್ದುವು. ತುಂಬುರು ನಾರದರಿಗೆ ಇದುವರೆಗೂ ಅನುಭೂತಿಗೆ ಬಾರದ ಭಕ್ತಿಭಾವಗಳು ಬರತೊಡಗಿದುವು. ಹಾಡುತ್ತಾ ಹನುಮಂತನ ಧ್ವನಿ ತಾರಸ್ಥಾಯಿಗೆ ಏರಿತು. ಹಾಲಸಮುದ್ರದ ತೆರೆಗಳು ಆಗಸದ ಕಡೆಗೆ ಏಳುತ್ತ ನಕ್ಷತ್ರಮಂಡಲವನು ಮುಸುಕಿದುವು. ಶೇಷನ ಸಾವಿರ ಹೆಡೆಗಳು ಓಲಾಡತೊಡಗಿದುವು.

ಹನುಮಂತನ ಧ್ವನಿ ಒಮ್ಮೆಗೇ ಮಂದ್ರಸ್ಥಾಯಿಗಿಳಿದು ದೇವಗಾಂಧಾರ ರಾಗವನ್ನು ಹಿಡಿಯಿತು. ಶಾಂತರಸ ಪ್ರಧಾನವಾದ ಆ ರಾಗಕ್ಕೆ ಹಾಲಸಮುದ್ರವು ಕ್ರಮಕ್ರಮವಾಗಿ ಸಂಕೋಚಿಸಿ ಹೆಪ್ಪುಗಟ್ಟುತ್ತ ಗಡ್ಡೆ ಕಟ್ಟಿತು. ತುಂಬುರು ನಾರದರ ಹಯಗ್ರೀವ ಮಹತೀವೀಣೆಗಳು ಜೋಳದ ಗದ್ದೆಯಲ್ಲಿದ್ದ ಮೊಳಕೆಗಳಂತೆ ಅದರಲ್ಲಿ ಸಿಕ್ಕಿಕೊಂಡುವು. ಕ್ಷೀರಸಾಗರವು ಇನ್ನಿಷ್ಟು ಗಟ್ಟಿಯಾಗಿ ಹಾಲುಗಲ್ಲಿನಂತಾಯಿತು. ಅದರಲ್ಲಿ ಸಿಕ್ಕಿಕೊಂಡ ಮಹಾಶೇಷನಿಗೆ ಕದಲಲಾಗದಂತಾಗಿ ಹೋಯಿತು.

ಇದನ್ನೆಲ್ಲ ನೋಡಿ ವಿಷ್ಣು ಹಾಡು ನಿಲ್ಲಿಸುವಂತೆ ಹನುಮಂತನಿಗೆ ಸಂಜ್ಞೆ ಮಾಡಿದನು. ಹಠಾತ್ತಾಗಿ ಗಾನ ನಿಂತು ಹೋಗಲು, ಎಲ್ಲರೂ ಗಾಬರಿಯಾದಂತೆ



ಮೆಟ್ಟಿಬಿದ್ದರು. ತುಂಬುರು ನಾರದರೂ ತಮ್ಮ ವೀಣೆಗಳಿಗಾಗಿ ಅತ್ತಿತ್ತ ನೋಡುತ್ತ ಹಾಲು ಗಲ್ಲಿನಂತಾದ ಸಮುದ್ರದಲ್ಲಿ ತಮ್ಮ ವೀಣೆಗಳು ಸಿಕ್ಕಿಕೊಂಡಿರುವುದನ್ನು ಕಂಡು ಕಕವಿಕರಾದರು.

"ಅದೇನು ಮಹಾ! ನೀವು ಹಾಡಿ ಸಮುದ್ರವನ್ನು ಕರಗಿಸಿ ನಿಮ್ಮ ವೀಣೆಗಳನ್ನು ತೆಗೆದುಕೊಳ್ಳಿ!" ಎಂದು ವಿಷ್ಣು ಆಜ್ಞೆ ಮಾಡಿದನು.

ಮೊದಲು ನಾರದನು ಹಾಡಿದನು. ಅವನ ಭಕ್ತಿಸಾಹಿತ್ಯಸಂಕೀರ್ತನೆಗಳಿಂದ ಏನೂ ಉಪಯೋಗವಾಗಲಿಲ್ಲ. ಆಮೇಲೆ ತುಂಬುರುವಿನ ಹಾಡು ಪ್ರಾರಂಭವಾಯಿತು. ಅವನ ಕಟ್ಟುಪಾಡಿನ ಶಾಸ್ತ್ರೀಯವಾದ ತಾಳಬದ್ಧಸಂಗೀತದಿಂದಲೂ ಯಾವ ಪರಿಣಾಮವೂ ಕಾಣಲಿಲ್ಲ. ಹಾಲಸಮುದ್ರವು ಸ್ವಲ್ಪ ಕೂಡಾ ಮೆತ್ತಗಾಗಲಿಲ್ಲ. ತುಂಬುರು ನಾರದರು ಈ ಮೊದಲು ತಾವು ಪಟ್ಟ ಗರ್ವಕ್ಕಾಗಿ ನಾಚಿಕೆಪಟ್ಟು ಗೌರವದಿಂದ ತಲೆವಾಗಿಸಿದರು.



ಅನಂತರ ವಿಷ್ಣುವಿನ ಆದೇಶದಂತೆ ಹನುಮಂತನೇ ಹಾಡತೊಡಗಿದನು. ಭೂಪಾಳ ರಾಗದಿಂದ ತೊಡಗಿ, ವಸಂತ, ಜಂಝೂಟಿ, ದೀಪಕ ಮೊದಲಾದ ರಾಗಗಳನ್ನು ಹಿಡಿದು ರಾಮನಾಮವನ್ನೇ ಗಾನ ಮಾಡಲು ತೊಡಗಿದನು.

ಆಗ ರಾಗರಾಗಿಣಿಯರು ರೂಪತಾಳಿ ನೃತ್ಯ ಮಾಡತೊಡಗಿದರು. ಹನುಮಂತನ ಗಾನಕ್ಕೆ ಸರಿಯಾಗಿ ರಾಗರಾಗಿಣಿಯರು ನರ್ತಿಸುತ್ತಿದ್ದರು. ಹನುಮಂತನ ಗಾನವು ಮತ್ತೆ ತಾರಸ್ಥಾಯಿಗೆ ಹೋಯಿತು. ಆ ರಾಗದಲ್ಲಿ ಪ್ರಳಯ ಕಂಪನವುಂಟಾಗಿ ಇತರ ಲೋಕಗಳವರೆಗೂ ಹರಡಿತು. ಕೈಲಾಸದಿಂದ ಶಿವನು ಢಮರುಕವನ್ನು ಬಾರಿಸುತ್ತಾ ತಾಂಡವನೃತ್ಯ ಮಾಡುತ್ತಾ ಬಂದನು. ಅವನ ಹಿಂದೆಯೇ ಪಾರ್ವತಿಯೂ, ಗಣಪತಿಯೂ, ಪ್ರಮಥಗಣಗಳೂ ಬಂದರು. ಬ್ರಹ್ಮನೂ ಪದ್ಮಾಸನದಿಂದಿಳಿದು ಅಲ್ಲಿಗೆ ಬಂದನು. ಅವನೊಂದಿಗೆ ವೀಣೆ ಬಾರಿಸುತ್ತಾ ಸರಸ್ವತಿಯೂ ಬಂದಳು. ಇಂದ್ರಾದಿ ದೇವತೆಗಳೂ ದಿಕ್ಪಾಲಕರೂ ಸಾಲು ಸಾಲಾಗಿ ಬಂದರು. ಹಾಲ ಸಮುದ್ರವು ಕರಗಿ ಅಗಲಗಲವಾಗ ತರಂಗಗಳಿಂದ ಉಯ್ಯಾಲೆ ಯಾಡತೊಡಗಿತು.

ಆಗ ಕ್ಷೀರಸಾಗರವು ದೊಡ್ಡದೊಂದು ವಿವಾಹ ಮಂಟಪದಂತೆ ಕಂಗೊಳಿಸತೊಡಗಿತು. ನವವಧೂವರರಂತೆ ಲಕ್ಷ್ಮೀನಾರಾಯಣರು ಕಂಡು ಬಂದರು. ಸೀತಾರಾಮರ ಕಲ್ಯಾಣವು ಹೀಗೆಯೇ ನಡೆದಿರಬೇಕೆಂದು ಹನುಮಂತನು ಆನಂದತನ್ಮಯತೆಯಲ್ಲಿ ಮುಳುಗಿಹೋದನು. ತುಂಬುರು ನಾರದರು ತಮ್ಮ ತಮ್ಮ ವೀಣೆಗಳನ್ನು ತೆಗೆದುಕೊಂಡರು. ಶೇಷನೂ ತನ್ನ ಹಾಸಿಗೆಯನ್ನು ಸರಿಪಡಿಸಿಕೊಂಡನು.

ಬ್ರಹ್ಮನ ಆದೇಶದಂತೆ ಹನುಮಂತನ ಸಂಗೀತವು ನಿಂತಿತು. ಸರಸ್ವತಿ ಬ್ರಹ್ಮಾನುಜ್ಞೆಯನ್ನು ಪಡೆದು ತನ್ನ ಅಭಿಪ್ರಾಯವನ್ನು ಹೀಗೆ ಹೇಳಿದಳು :

"ಹನುಮಂತನು ಹಾಡಿದ ರೀತಿ 'ಹನುಮದ್ಗಾನ' ಎಂದು ಹೆಸರು ಪಡೆದು ಚಿರಕಾಲ ವರ್ಧಿಸಿಕೊಂಡಿರುತ್ತದೆ. ಇದು ಪಂಡಿತರಿಗೂ ಪಾಮರರಿಗೂ ಸಮಾನ ರೀತಿಯ ಆಕರ್ಷಣೀಯವೆನಿಸಿ ಹೃದಯವನ್ನು ಅರಳಿಸಿ ಮನಸ್ಸಿನ ಶಕ್ತಿಯನ್ನು ಹೆಚ್ಚಿಸುವಂತಹುದು. ಇದುವೇ ಸಂಗೀತ ಕಲೆಯ ಪರಮಾವಧಿ. ನಾರದರ ಸಂಗೀತವು ಭಾವ ಪ್ರಧಾನವಾದುದು. ತುಂಬುರುರ ಸಂಗೀತ ತಾಳ ಪ್ರಧಾನವಾದುದು. ಭಾವವನ್ನೂ ತಾಳವನ್ನೂ ಸಮನ್ವಯಗೊಳಿಸುವಂತಹುದು ರಾಗ. ಭಾವ, ರಾಗ, ತಾಳಗಳು ಮೂರೂ ಸಮಾನವೇ ಆದರೂ, ರಾಗವು ಜೀವದಂತಹುದು; ರಸಾತ್ಮಕವಾದುದು. ಮನಸ್ಸಿನ ಮೇಲೆ ಅದರ ಪ್ರಭಾವವೇ ಹೆಚ್ಚು. ಹನುಮದ್ಗಾನವು ರಾಗ ಪ್ರಧಾನವಾದುದರಿಂದ ಅದು ತಾಳವಾದ್ಯ ಮೊದಲಾದ ಹಿಮ್ಮೇಳಗಳ ಅಗತ್ಯವಿಲ್ಲದಿದ್ದರೂ, ಯಾವಾಗಲೂ ಜನ ಮನರಂಜಕವಾಗಿರುತ್ತದೆ!"

ಸರಸ್ವತಿಯು ತೀರ್ಪವನ್ನು ಕೇಳಿ ಎಲ್ಲರೂ ನಿಜ ನಿಜವೆಂದು ಉಲಿದರು. ಬ್ರಹ್ಮನು ಹನುಮಂತನ ಹತ್ತಿರ ಬಂದು. "ಹನುಮಾ, ನೀನೂ ಯಾವ ಕೋರಿಕೆಯನ್ನೂ ಕೋರದಿದ್ದರೂ ನಿನ್ನ ತಪಸ್ಸಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಬ್ರಹ್ಮಪದವಿ ಕೂಡಾ ಅದಕ್ಕೆ ಸಾಲದು. ಆದರೆ ಅದಕ್ಕಿಂತ ಹೆಚ್ಚಿನದೇನೂ ಇಲ್ಲದುದರಿಂದ ನೀನು ಭವಿಷ್ಯದ್‌ಬ್ರಹ್ಮನಾಗಿರುವಿ! ನೀನು ಆ ಪದವಿಯನ್ನು ನಿರ್ವಹಿಸದೆ ತಪ್ಪದೆಂದು ಬರೆದಿಡಲಾಗಿದೆ. ಬರಲಿರುವ ಕಲ್ಪದಲ್ಲಿ ನಿನ್ನಿಂದಲೇ ಸೃಷ್ಟಿಯುಂಟಾಗುತ್ತದೆ" ಎಂದು ಹೇಳಿದನು.

ಆಗ ಶಿವನು ಮುಂದೆ ಬಂದು, "ಹನುಮಾ! ಈ ಬ್ರಹ್ಮದೇವನ ಸೃಷ್ಟಿಯಲ್ಲಿ ಒಳ್ಳೆಯವರಿಗಿಂತಲೂ ಕೆಟ್ಟವರೇ ಹೆಚ್ಚಾಗಿ ಹುಟ್ಟುತ್ತಿದ್ದಾರೆ, ಹುಟ್ಟಿದ್ದಾರೆ, ಹುಟ್ಟುವರು! ತಾನು ದೇವನೆಂಬ ಅಹಂಕಾರದಿಂದ. ಪರಿಪೂರ್ಣ ಮಾನವತ್ವದ ಮೇಲೆ ಗುರಿ ತಪ್ಪಿದುದರಿಂದ ಈ ಬ್ರಹ್ಮನ ಸೃಷ್ಟಿ ಹೀಗಾಗಿದೆ. ನೀನು ಕೋತಿಯಾದರೂ. ನಿನ್ನ ಧ್ಯಾನದಲ್ಲಿ ವಿನಯವಿದ್ದು ಶ್ರೀರಾಮನು ತುಂಬಿರುವುದರಿಂದ ನಿನ್ನ ಸೃಷ್ಟಿಯಲ್ಲಿ ರಾಮನಂತಹ ಪರಿಪೂರ್ಣ ಮಾನವರು, ಸೀತೆಯಂತಹ ಮಾನಿನಿಯರು, ಲಕ್ಷ್ಮಣನಂತಹ ಸಹೋದರರು ಬಹಳ ಮಂದಿ ಇರಬಲ್ಲರು. ಅದುವರೆಗೂ ನೀನು ವಿಷ್ಣುಸಾನ್ನಿಧ್ಯದಲ್ಲಿರು!" ಎಂದು ಹೇಳಿದನು.

ಆಗ ಬ್ರಹ್ಮನು "ಹೌದು ಹನುಮಾ! ಶಿವನು ನಿಜವಾಗಿರುವುದನ್ನೇ ಹೇಳಿದನು. ಅನೇಕ ಮಂದಿ ಒಳ್ಳೆಯವರ ನಡುವೆ ಕೆಲವು ಮಂದಿ ದಾರಿ ತಪ್ಪಿದವರಿದ್ದರೂ ಅವರನ್ನು ಸರಿ ದಾರಿಗೆ ತರುವ ಸದವಕಾಶವು ಹೆಚ್ಚಾಗಿಯೇ ನಿನ್ನ ಸೃಷ್ಟಿಯಲ್ಲಿರುತ್ತದೆ. ಅದೇ ನಿನ್ನ ಸೃಷ್ಟಿಯ ವಿಶೇಷ. ಬರಲಿರುವ ಬ್ರಹ್ಮಕಲ್ಪದಲ್ಲಿ ವಿಷ್ಣುವಿನ ಹೊಕ್ಕಳಿನಿಂದ ಹೊಸ ಬ್ರಹ್ಮಕಮಲವು ಅರಳುತ್ತದೆ. ಆ ಪದ್ಮಾಸನವನ್ನು ನೀನು ಬ್ರಹ್ಮನಾಗಿ ಅಲಂಕರಿಸುವಿ. ನೀನು ಭವಿಷ್ಯದ್ ಬ್ರಹ್ಮದೇವ! ಸೃಷ್ಟಿಕರ್ತ!" ಎಂದನು ಬ್ರಹ್ಮವಾಕ್ಯದಂತೆ.

ಎಲ್ಲರೂ ಹನುಮಂತನನ್ನು ಮಂಗಳಗಾನ ಮಾಡುವಂತೆ ಕೇಳಿಕೊಂಡರು. ಹನುಮಂತನು "ಪವಮಾನಸುತನು ಹಿಡಿಯುವ ರಾಮನ ಪಟ್ಟೆ ಪಾದಾರವಿಂದಗಳಿಗೆ ನಿತ್ಯ ಜಯಮಂಗಳ!" ಎಂದು ಶ್ರೀರಾಗದಿಂದ ಮಂಗಳಗಾನ ಮಾಡಿದನು.

ಹನುಮಂತನು ನಾರದ ತುಂಬುರು ಗರುತ್ಮಂತರೊಂದಿಗೆ ಕ್ಷೀರಸಾಗರದಲ್ಲಿ ಶೇಷತಲ್ಪಶಾಯಿಯಾದ ವಿಷ್ಣುವಿನ ಸನ್ನಿಧಾನದಲ್ಲಿ, ಲಕ್ಷ್ಮೀನಾರಾಯಣರನ್ನು ಸೀತಾರಾಮರನ್ನಾಗಿಸಿ ಸೇವೆ ಮಾಡಿಕೊಂಡು ಚಿರಂಜೀವಿಯಾಗಿರುವನು. ಬರಲಿರುವ ಬ್ರಹ್ಮ ಅವನೇ!

(ಮುಗಿಯಿತು)

